# ಕನ್ನಡ ಕಾವ್ಯ ಪರಂಪರೆಯಲ್ಲಿ

# ಪ್ರೀತಿಯ ನೆಲೆಗಳು

ಡಾ. ವಿಜಯಾ ಸುಬ್ಬರಾಜ್



# ಕನ್ನಡ ಕಾವ್ಯ ಪರಂಪರೆಯಲ್ಲಿ ಪ್ರೀತಿಯ ನೆಲೆಗಳು

ಡಾ. ವಿಜಯಾ ಸುಬ್ಬರಾಜ್

ಎಲ್. ಎನ್. ಜಿ. ಪಬ್ಲಿಕೇಷನ್ಸ್
2, ಮುನೇಶ್ವರ ಬ್ಲಾಕಿನ ಎರಡನೆಯ ಕ್ರಾಸ್
(ನಾಗಪ್ಪ ರಸ್ತೆಗೆ ಹೊಂದಿಕೊಂಡಂತೆ)
ರಾಜಮಹಲ್ ಗುಟ್ಟಹಳ್ಳಿ : : ಬೆಂಗಳೂರು-560 003

**KANNADA KAVYA PARAMPAREYELLI PRITHIYA NELEGALU** - anthology of prasangas from kannada a poetic tradition by **Dr. Vijaya Subbaraj**, Published by **L.N.G. PUBLICATIONS**, 2, Muneshwara Block, Second Cross, (at Nagappa Street), Rajamahal Guttahalli, Bangalore-560 003. in 2007



ಪ್ರಥಮ ಮುದ್ರಣ : 2007

ಪುಟಗಳು : 132

ಬೆಲೆ ರೂ. 65/-

ಮುಖಪುಟ ವಿನ್ಯಾಸ :
ಮೋನಪ್ಪ

ಅಕ್ಷರ ಜೋಡಣೆ
ಸಿ.ಪಿ.ಇನೊವೇಷನ್ಸ್
ದೂ : 22264016

ಮುದ್ರಕರು :
ಕಿರಣ್ ಎಂಟರ್‌ಪ್ರೈಸೆಸ್
ಬೆಂಗಳೂರು - 560053.

## ಪ್ರೀತಿ ಪ್ರಪಂಚವನ್ನು ಪ್ರವೇಶಿಸುವ ಮೊದಲು ಒಂದೆರಡು ಮಾತು.

ಒಮ್ಮೆ ಯಾವುದೋ ಒಂದು ವಿಚಾರ ಸಂಕಿರಣದಲ್ಲಿ ಪ್ರಬಂಧ ಮಂಡಿಸುವ ಸಲುವಾಗಿ ವಿಷಯದ ಬಗ್ಗೆ ಆಲೋಚಿಸುತ್ತಿದ್ದೆ.ಅದೇ ಸಂದರ್ಭದಲ್ಲಿ ಎಂ.ಇ.ಎಸ್ ಕಾಲೇಜಿನಲ್ಲಿ ಪಂಪನ ಬಗ್ಗೆ ವಿಚಾರ ಸಂಕಿರಣಕ್ಕೆ ಆಹ್ವಾನ ಬಂತು. ವಿಷಯವನ್ನು ನನ್ನ ಆಯ್ಕೆಗೇ ಬಿಟ್ಟರು. ಆಕಸ್ಮಿಕವಾಗಿ ಪ್ರೀತಿ ಸಂಬಂಧಗಳು, ಅದರನೆಲೆಗಳು ಕುರಿತು ಯಾಕೆ ಪ್ರಂಬಂಧ ಮಂಡಿಸಬಾರದು- ಎಂದು ನನ್ನಲ್ಲೇ ಆಲೋಚಿಸಿ, ಪ್ರೀತಿ, ಸಂಬಂಧಗಳಲ್ಲಿ ನಿಕ್ಷಿಪ್ತವಾಗಿರುವ ಅನೇಕ ಆಯಾಮಗಳನ್ನು ವಿಶ್ಲೇಷಿಸತೊಡಗಿದಾಗ ದಿಗ್ಭ್ರಮೆಯಾಯಿತು. ಪ್ರೀತಿ ಒಂದು ಗುಣಾತ್ಮಕ ಮೌಲ್ಯವೇ ಆದರೂ ಅತಿ ಪ್ರೀತಿಯ ಪರಿಣಾಮವಾಗಿ ಏನೆಲ್ಲ ದುರಂತಗಳು, ಅನಾಹುತಗಳು ಸಂಭವಿಸುತ್ತವೆ ಎನ್ನುವ ಸತ್ಯದ ಮನವರಿಕೆಯಾಯಿತು. 'ಪಂಪನ ಕಾವ್ಯದಲ್ಲಿ ಪ್ರೀತಿಯ ನೆಲೆಗಳು' ಕುರಿತು ಪ್ರಬಂಧ ಮಂಡಿಸಿದಾಗ, ಮೆಚ್ಚುಗೆಯ ಪ್ರತಿಕ್ರಿಯೆ ಬಂದಾಗ, ಇದೇ ಜಾಡಿನಲ್ಲಿ ಹೊರಟು 'ಕನ್ನಡ ಕಾವ್ಯ ಪರಂಪರೆಯಲ್ಲಿ ಪ್ರೀತಿಯ ನೆಲೆಗಳು' ಹುಡುಕಾಟ ಪ್ರಾರಂಭವಾಗಿ, ಒಂದು ಯೋಜನೆ ಸಿದ್ಧಪಡಿಸಿ, 'ತರಂಗ' ಪತ್ರಿಕೆಯ ವ್ಯವಸ್ಥಾಪಕ ಸಂಪಾದಕರಾದ ಸಂಧ್ಯಾ ಎಸ್. ಪೈ ಅವರಿಗೆ ಪತ್ರ ಬರೆದೆ. ಕೂಡಲೇ ಸಂಧ್ಯಾ ಅವರು ತುಂಬಾ ಕುತೂಹಲ ವ್ಯಕ್ತಪಡಿಸಿ, ಮೆಚ್ಚಿ, ಒಂದೆರಡು ಪ್ರಸಂಗಗಳನ್ನು ಬರೆದು ಕಳುಹಿಸಲು ಹೇಳಿದರು. ಅಂತೆಯೇ ನಾನು ಒಂದೆರಡು ಪ್ರಸಂಗಗಳನ್ನು ಕನ್ನಡ ಕಾವ್ಯಗಳಿಂದ ಆಯ್ದು ಪ್ರೀತಿ ವಿಶ್ಲೇಷಣೆಯ ಮಾತುಗಳೊಂದಿಗೆ ಬರೆದು ಕಳುಹಿಸಿಕೊಟ್ಟೆ, ಅದೇ ಪತ್ರಿಕೆಯ ಸಂಪಾದಕರಾದ ತಿಲಕ್‌ನಾಥ ಮಂಜೇಶ್ವರರು ಅವುಗಳನ್ನು ಅವಗಾಹಿಸಿ, ಸ್ವೀಕೃತಿಯನ್ನು ಸೂಚಿಸಿ ಪುಟ ಸಂಖ್ಯೆಯ ಮಿತಿಯನ್ನು ನಿರ್ದೇಶಿಸಿ ಕಂತುಗಳನ್ನು ಕಳುಹಿಸಿಕೊಡಲು ತಿಳಿಸಿದರು. ಇದರಿಂದ ಉತ್ತೇಜಿತಳಾದ ನಾನು ಪಂಪ, ಪೊನ್ನ, ಜನ್ನ ಮೊದಲಾಗಿ ಚಂದ್ರಶೇಖರ ಕಂಬಾರರನಾಟಕ ಸಂಗ್ಯಾ-ಬಾಳ್ಯ ಮತ್ತು

ಜನಪದ ಕಾವ್ಯವಾದ 'ಕೆರೆಗೆ ಹಾರ'ದವರೆಗೆ ಅನೇಕ 'ಪ್ರೀತಿ' ಸನ್ನಿವೇಶಗಳನ್ನು ಆಯ್ದುಕೊಂಡು ಆ ಪ್ರೀತಿ ಸಂಬಂಧಗಳಲ್ಲಿ ಹುದುಗಿರಬಹುದಾದ ತ್ಯಾಗ, ನೋವು, ಸಾವು, ಅಸೂಯೆ, ದ್ವೇಷ-ಇತ್ಯಾದಿ ಹಲವಾರು ನೆಲೆಗಳನ್ನು ಅಥವಾ ಮುಖಗಳನ್ನು ವಿಶ್ಲೇಷಣೆಯ ಮೂಲಕ ಅನಾವರಣಗೊಳಿಸಿದೆ.13 ಕಂತುಗಳಲ್ಲಿ 'ತರಂಗ'ದಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿ ಅದ್ಭುತವಾದ ಮೆಚ್ಚಿಗೆಯ ಪ್ರತಿಕ್ರಿಯೆ ದೊರೆಯಿತು; ಸಾಕಷ್ಟು ಹೆಸರೂ ಬಂತು. ಈ ಸಂಬಂಧವಾಗಿ 'ತರಂಗ'ದ ಸಂಧ್ಯಾ ಎಸ್.ಪೈ. ಮತ್ತು ತಿಲಕ್‌ನಾಥ್ ಮಂಜೇಶ್ವರ್ ಅವರಿಗೆ ನನ್ನ ಆತ್ಮೀಯ ಕೃತಜ್ಞತೆಗಳು ಇದೇ ಸಂದರ್ಭದಲ್ಲಿ ಇದನ್ನು ಪುಸ್ತಕರೂಪದಲ್ಲಿ ಪ್ರಕಟಿಸಲು ಮುಂದಾಗಿರುವ ಎಲ್.ಎನ್.ಜಿ. ಪ್ರಕಾಶಕರಿಗೆ ಮತ್ತು ಪುಸ್ತಕವಾಗಿಸಲು ಪ್ರೇರಣೆ ನೀಡಿದ ಶ್ರೀ.ಬಿ.ಎಸ್.ಸ್ವಾಮಿ ಅವರಿಗೆ ನನ್ನ ಕೃತಜ್ಞತೆಗಳು. ಪ್ರೀತಿಯ ಬಗ್ಗೆ ಇಷ್ಟು ಬಗೆಯಲ್ಲಿ ಅಲೋಚಿಸಲು, ಪ್ರೇರಣೆ ನೀಡಿದ ಮತ್ತು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರೋತ್ಸಾಹಿಸಿದ ಸಂಧ್ಯಾ ಎಸ್.ಪೈ. ಮತ್ತು ತಿಲಕ್‌ನಾಥ್ ಮಂಜೇಶ್ವರ್ ಅವರಿಗೆ ಮತ್ತೊಮ್ಮೆ ನನ್ನ ಕೃತಜ್ಞತೆಗಳು.

*ಡಾ|| ವಿಜಯಾ ಸುಬ್ಬರಾಜ್.*

# ಪರಿವಿಡಿ

# ಪ್ರೀತಿಯ ಬಗ್ಗೆ

ಪ್ರಪಂಚದಲ್ಲಿ ಪ್ರೀತಿ, ಪ್ರೇಮ ಎನ್ನುವುದು ವಿಚಿತ್ರವೂ ಅಪೂರ್ವವೂ ಆದ ಮನಃಸ್ಥಿತಿಗಳು, ಅನುಭೂತಿಗಳು, ಪ್ರೀತಿಯನ್ನು ಒಂದು ಗುಣಾತ್ಮಾಕ ಮೌಲ್ಯವೆಂದು ಪರಿಗಣಿಸಿ ಜಗತ್ತಿನ ಪ್ರತಿಯೊಬ್ಬ ವ್ಯಕ್ತಿಯಲ್ಲೂ ಅದು ನೆಲೆಸುವಂತಾದರೆ ಎಂಥ ಅದ್ಭುತ ಪರಿಣಾಮವನ್ನು ಕಾಣಬಹುದು:- ಎಂದು ಎಲ್ಲರೂ ಬಾಯಿ ಚಪ್ಪರಿಸುತ್ತಾರೆ. ಪ್ರೀತಿಯಿದ್ದರೆ ಶಾಂತಿ, ಸುಖ, ಕ್ಷೇಮ, ನೆಮ್ಮದಿ ಭದ್ರತೆಗಳು ನೆಲೆಗೊಳ್ಳುತ್ತವೆ. ಯಾವುದೇ ಬಗೆಯ ಘರ್ಷಣೆ, ಗಲಭೆ, ದ್ವೇಷಗಳಿಗೆ ಅವಕಾಶವೇ ಇರುವುದಿಲ್ಲ. ಎಂದೆಲ್ಲ ನಂಬುತ್ತಾರೆ. ಆದರೆ ಪ್ರೀತಿ absolute ಪ್ರೀತಿಯಾಗಲು ಸಾಧ್ಯವೇ ಇಲ್ಲ. ಎಲ್ಲರೂ ಎಲ್ಲವನ್ನೂ, ಎಲ್ಲರನ್ನೂ ಪ್ರೀತಿಸಲು ಸಾಧ್ಯವಿಲ್ಲ. ಪ್ರೀತಿಯಲ್ಲಿ ಆಯ್ಕೆಯೂ ಇದೆ.

'ಪ್ರೀತಿ' ಪರಿಕಲ್ಪನೆಯ ಅನುಸಂಧಾನಕ್ಕೆ ತೊಡಗಿದಾಗ ಅದರ ನಿಜವಾದ ಸಂಕೀರ್ಣತೆಯ ಸ್ವರೂಪ ಮನದಟ್ಟಾಗುತ್ತದೆ. ಪ್ರೀತಿಯ ಬಗ್ಗೆ ನಾವು ಬೆಳೆಸಿಕೊಂಡ ನಂಬಿಕೆಗಳೂ, ರೂಢಿಯಿಂದ ಪ್ರಚಲಿತ ಪರಿಭಾಷೆಗಳೂ ಅಪ್ಪಟ ಸುಳ್ಳೆಂಬುದು, ಪ್ರೀತಿ, ಪ್ರೇಮ ಇತ್ಯಾದಿ ಸಂಬಂಧಗಳ ಅಂತರಾಳ ಬಗಿದು ನೋಡುವಾಗ ನಮ್ಮ ಸ್ಪಷ್ಟ ಗ್ರಹಿಕೆಗೆ ಬರಲು ಸಾಧ್ಯವಾಗುತ್ತದೆ.

ಪ್ರೀತಿ, ಪ್ರೇಮ ಎಂಬ ಎರಡು ಶಬ್ಧರೂಪಗಳಿದ್ದು ಅರ್ಥಗ್ರಹಿಕೆಯಲ್ಲಿ ಸ್ವಲ್ಪ ಗೊಂದಲವಿರುವುದು ಕಾಣಿಸುತ್ತದೆ. ಪ್ರೀತಿ, ಪ್ರೇಮ ಶಬ್ಧಗಳಿಗೆ ಸಾಂದರ್ಭಿಕವಾಗಿ ಬೇರೆ ಬೇರೆ ಅರ್ಥಗಳು ಹೊಳೆಯುತ್ತವೆ. ಗಂಡು ಹೆಣ್ಣು ಹೊರತಾಗಿ, ಯಾವುದೇ ವಸ್ತು, ವ್ಯಕ್ತಿ, ವಿಚಾರದ ಬಗ್ಗೆ ಹೇಳುವಾಗ, 'ಪ್ರೀತಿ' ಶಬ್ದವನ್ನು ಬಳಸುತ್ತೇವೆಯಲ್ಲದೆ

'ಪ್ರೇಮಿಸುತ್ತೇನೆ' ಎಂದು ಸಾಮಾನ್ಯವಾಗಿ ಬಳಸುವುದಿಲ್ಲ. 'ಪ್ರೇಮಿಸುವವರು ಪ್ರೇಮಿಗಳು' ಎಂದೇ ಇದ್ದರೂ, ನಮಗೆ ತಟ್ಟನೆ ಹೊಳೆಯುವುದು 'ಗಂಡು-ಹೆಣ್ಣು'ಗಳು ಮಾತ್ರ. ಭಗವಂತನನ್ನು ಪ್ರೀತಿಸಬೇಕು ಎನ್ನುತ್ತೇವೆಯಲ್ಲದೆ ಪ್ರೇಮಿಸಬೇಕು ಎಂದು ಹೇಳುವುದಿಲ್ಲ. ಆದರೆ ಪ್ರೇಮ ಪ್ರೇಮಿಸು ಶಬ್ದಗಳ ಬಳಕೆಯಾದಲ್ಲಿ ಅಪರಾಧವೇನೂ ಆಗುವುದಿಲ್ಲವಾದರೂ ಶಬ್ದಗಳಿಗೆ ರೂಢಿಯಿಂದ ಸಾಂದರ್ಭಿಕ ಅರ್ಥಗಳು ಪ್ರಚಲಿತವಾಗಿರುತ್ತವೆ. ಪ್ರೀತಿ, ಪ್ರೇಮ ಶಬ್ದಗಳ ಗೊಂದಲವೇನೇ ಇದ್ದರೂ ಪ್ರೀತಿ, ಪ್ರೀತಿಯ ನೆಲೆಗಳ ಚಿಂತನೆ ನಮ್ಮ ಕನ್ನಡ ಕಾವ್ಯ ಪರಂಪರೆಯ ಸಂದರ್ಭದಲ್ಲಿ, ನನಗೆ ಮುಖ್ಯವೆನಿಸುತ್ತದೆ. 'ಪ್ರೀತಿ' ಎಂಬುದಕ್ಕೆ ಅರ್ಥ ಬರುವುದು ಪ್ರೀತಿಸುವ ಇಬ್ಬರಲ್ಲೂ ಈ ಭಾವಸ್ಥಿತಿ ನೆಲೆಗೊಂಡಿದ್ದಾಗ ಮಾತ್ರವೇ. 'ಪ್ರೀತಿ' ತನ್ನಲ್ಲಿ ತಾನೇ ಇರಲು ಸಾಧ್ಯವಿಲ್ಲ. ಅದರ ಹಂಚಿಕೆಯಾಗಬೇಕು. ವಸ್ತು; ವ್ಯಕ್ತಿ, ವಿಚಾರದ ಆಲಂಬನ ಬೇಕೇ ಬೇಕು.'

ಪ್ರೀತಿ ಎಂಬುದು ಒಂದು ಅನುಭೂತಿಯೇ ಹೊರತು ವ್ಯಾಖ್ಯಾನಕ್ಕೆ ಪರಿಭಾಷೆಯ ಚೌಕಟ್ಟಿಗೆ ನಿಲುಕುವುದಿಲ್ಲ; ಗ್ರಹಿಕೆಗೆ ಬರುವುದಿಲ್ಲ. ಪ್ರೀತಿ ತನ್ನೊಳಗೆ ತಾನೇ ಹಲವು ಅರ್ಥಗಳನ್ನು ಅಡಗಿಸಿಕೊಂಡಿದೆ.ಹಲವು ಆಯಾಮಗಳನ್ನು ಒಳಗೊಂಡಿದೆ. ವ್ಯಕ್ತಿ ವ್ಯಕ್ತಿಯ ನಡುವೆ ಒಡೆದೆದ್ದು ಕಾಣುವಂತಹ ಪ್ರೀತಿಯೇ ಇದ್ದರೂ ಆ ಪ್ರೀತಿಯ ನಂಟಿನ ಹಿಂದೆ, ಪ್ರೀತಿಸುವ ವ್ಯಕ್ತಿಗಳ ಮನದಾಳದ ವಿಚಾರಗಳು ಆಲೋಚನೆಗಳು ಸುಪ್ತ ಭಾವೋದ್ದೇಶಗಳೂ ಏನಿವೆಯೆಂಬುದೂ ಬಹು ಮುಖ್ಯವಾಗುತ್ತದೆ. ಮೇಲೆ ಕಾಣುವ ಪ್ರೀತಿಯ ಮುಖ ಬೆಲೆಯಿಂದಲೇ 'ಸಾಚಾ' ಸರಳ ಮುಗ್ಧ ಎಂದು ನಂಬಿ ಮೋಸ ಹೋಗಬೇಕಾದ್ದಿಲ್ಲ. 'ಪ್ರೀತಿ' ಎಂದರೆ ಜೀವನ; ಜೀವನ ಎಂದರೆ ಪ್ರೀತಿ; ಪ್ರೀತಿ ಸರಳ; ಸುಂದರ ಎಂದು ಭಾವುಕವಾಗಿ ಬಣ್ಣಿಸುವುದುಂಟು. ಆದರೆ 'ಪ್ರೀತಿ' ಎಂಬುದು ಸಂಕೀರ್ಣ. ಸುಲಭವಾಗಿ ಪ್ರೀತಿಯ ಅಂತರಾರ್ಥವನ್ನು ಅರಿಯಲು ಸಾಧ್ಯವಿಲ್ಲ. ಆದ್ದರಿಂದಲೇ ಪ್ರೀತಿಗೆ ಇರುವ ಅಸಾಧ್ಯ ನೆಲೆಗಳ ಚಿಂತನೆ ಅತಿ ಮುಖ್ಯವೆನಿಸುತ್ತದೆ. ಬಂಧು ಪ್ರೀತಿ, ಮಿತ್ರ ಪ್ರೀತಿ, ಸೋದರ ಪ್ರೀತಿ, ತಂದೆ ತಾಯಿ ಮಕ್ಕಳ ಪ್ರೀತಿ, ಗಂಡು, ಹೆಣ್ಣಿನ ಪ್ರೀತಿ, ಜೊತೆಗೆ ಯಜಮಾನ ಸೇವಕ ಪ್ರೀತಿ (ಸ್ವಾಮಿ ಪ್ರೀತಿ) ಯೂ ಉಂಟು. ಮೇಲಿನ

ಎಲ್ಲ ಸಂಬಂಧಗಳಲ್ಲಿ ಪ್ರೀತಿ ಅನಿವಾರ್ಯವಾಗದೇ ಹೋದರೂ ಪ್ರೀತಿಸುವುದಕ್ಕೆ, ಪ್ರೀತಿ ಹುಟ್ಟುವುದಕ್ಕೆ ಒಂದು ಕಾರಣ ಇದ್ದೇ ಇರುತ್ತದೆ. ಸೌಂದರ್ಯ, ಸೇವೆ, ವಾತ್ಸಲ್ಯ, ಉಪಕಾರ-ಹೀಗೆ ಯಾವುದಾದರೂ ಒಂದು ಕಾರಣ ಇರಬಹುದು. ಎಲ್ಲ ಸಂಬಂಧಗಳಲ್ಲಿನ ಪ್ರೀತಿಗಿಂತ ತಾಯಿ ಮಕ್ಕಳ ಪ್ರೀತಿಯೊಂದೇ ಪರಿಶುದ್ಧವಾದುದು . 'ಪ್ರೀತಿ'ಸುವ ಕ್ರಿಯೆ ಒಳ್ಳೆಯದೇ ಆದರೂ ಪ್ರೀತಿಯ ಪರಿಣಾಮಗಳು ಒಳ್ಳೆಯದಾಗಿ ರುತ್ತವೆಂದು ಹೇಳಲಾಗುವುದಿಲ್ಲ. ಪ್ರೀತಿಯ ನೆಲೆಯಲ್ಲಿ ಆನಂದ, ಸುಖ, ಸಂತೋಷ, ನೆಮ್ಮದಿ, ನಿಸ್ವಾರ್ಥತೆ, ತ್ಯಾಗ ಇತ್ಯಾದಿ ಗುಣಾತ್ಮಕ ಮೌಲ್ಯಗಳಿರುವುದು ಎಷ್ಟು ಸತ್ಯವೋ ಅವುಗಳ ಜೊತೆಗೆ ಸೇಡು, ದ್ವೇಷ, ಸ್ವಾರ್ಥ, ಸಾವು, ನೋವು ಇತ್ಯಾದಿ ಋಣಾತ್ಮಕ ಮೌಲ್ಯಗಳಿರುವುದೂ ಅಷ್ಟೇ ಸತ್ಯ. ಅತಿಯಾದ ಪ್ರೀತಿ, ಕೆಲವೊಮ್ಮೆ ಬಂಧನವಾಗುತ್ತದೆ; ಸಾವಿನ ದುರಂತಕ್ಕೆ ಪ್ರಚೋದನೆಯಾಗುತ್ತದೆ. ವ್ಯಕ್ತಿತ್ವ ವಿಕಾಸವನ್ನು ಕುಂಠಿತಗೊಳಿಸುತ್ತದೆ. ಪ್ರೀತಿಸುವ ವ್ಯಕ್ತಿ, ವಿಚಾರ, ವಸ್ತುವನ್ನು ಭದ್ರಪಡಿಸಿಕೊಳ್ಳುವ, ಸಮರ್ಥಿಸಿಕೊಳ್ಳುವ ಭರದಲ್ಲಿ ಬೇರೆಯವರಿಗೆ ಉಂಟಾಗುವ ಮುಜುಗರ ಹಿಂಸೆ, ಅವಮಾನಗಳ ಕಡೆ ಲಕ್ಷ್ಯವೇ ಇಲ್ಲದಾಗುತ್ತದೆ. ಅತಿಯಾದ ಪ್ರೀತಿಯ ಸ್ತರದಲ್ಲಿ ಭಯಂಕರ ಸ್ವಾರ್ಥವಿರುತ್ತದೆ.

ಪ್ರೀತಿಯ ಹರಹು ದೊಡ್ಡದು.ಯಾವುದೇ ಉದ್ದೇಶದ ಹಿನ್ನಲೆ ಹೊಂದಿದ್ದು ಜೀವನವನ್ನು ಪೂರ್ತಿಯಾಗಿ ಆಕ್ರಮಿಸಿಕೊಂಡಿರುತ್ತದೆ. ಪ್ರೀತಿಯಿಲ್ಲದೆ ಬದುಕಿಲ್ಲ; ಪ್ರೀತಿಯಿಲ್ಲದೆ ಕಲೆ, ಸಾಹಿತ್ಯಗಳಿಲ್ಲ. ನಮ್ಮಲ್ಲಿ ಕನ್ನಡ ಕವಿಗಳ ಕಾವ್ಯಗಳಲ್ಲಿ 'ಪ್ರೀತಿ' ಒಂದಲ್ಲ ಒಂದು ರೀತಿಯಲ್ಲಿ ಕಾಣಿಸಿಕೊಂಡಿರುತ್ತದೆ. ಮಾನವ ಸಂಬಂಧಗಳಿಲ್ಲದೆ ಬದುಕಿಲ್ಲ; ಬದುಕಿಲ್ಲದೆ ಸಾಹಿತ್ಯವಿಲ್ಲ. ಬದುಕೇ ಸಾಹಿತ್ಯದ ಬಂಡವಾಳ; ಮೂಲ ಸಾಮಗ್ರಿ. ಪಂಪನಿಂದ ಈ ವರೆಗಿನ ಲೇಖಕರ, ಕವಿಗಳವರೆಗೆ 'ಪ್ರೀತಿ' ಸೃಜನಶೀಲ ಅಭಿವ್ಯಕ್ತಿಯ ಕೇಂದ್ರವಸ್ತುವಾಗಿದೆ. ಪ್ರೀತಿ ಸಂಬಂಧಗಳ ಮೂಲಕವೇ ಪಾತ್ರಗಳ ಸುಪ್ತ ವ್ಯಕ್ತಿತ್ವಗಳು ಅನಾವರಣಗೊಂಡಿವೆ. ನಮ್ಮ ಸಂಸ್ಕೃತಿಯ ಅವಿಚ್ಛಿನ್ನ ಭಾಗವಾದ ರಾಮಾಯಣ, ಮಹಾಭಾರತ ಕಾವ್ಯಗಳಂತೂ ವಿಶಾಲವಾದ ಕಥಾಭಿತ್ತಿಯಲ್ಲಿ ಮಾನವ ಜಗತ್ತಿನ ಅಸಂಖ್ಯ, ಅನೂಹ್ಯ

ಸಂಬಂಧದ ಎಳೆಗಳನ್ನು ಅವುಗಳ ಎಲ್ಲಾ ಸೂಕ್ಷ್ಮತೆಗಳೊಂದಿಗೆ ಬಿಡಿಸಿಟ್ಟಿವೆ. ಇಂತಹ ಕಾವ್ಯ ಮೂಲಗಳಿಂದ ಪ್ರೇರಣೆ ಪಡೆದ ನಮ್ಮ ಹಿಂದಿನ ಕವಿಗಳು ಮೂಲ ಕಥೆಗೆ ನಿಷ್ಠವಾಗಿದ್ದೂ ಮನುಷ್ಯ ಸಂಬಂಧಗಳ ಮೂಲದ ಪ್ರೀತಿಯನ್ನು ತಮ್ಮದೇ ಆದ ಒಂದು ಸ್ವತಂತ್ರ, ದಾರ್ಶನಿಕ ದೃಷ್ಟಿಯೊಂದಿಗೆ, ವಿಭಿನ್ನ ನೆಲೆಗಳಲ್ಲಿ ಚಿಂತನೆಗೆ ಒಳಪಡಿಸಿದ್ದಾರೆ. ಆದ್ದರಿಂದ ಪ್ರೀತಿಯ ಸ್ವರೂಪವನ್ನು ಕಟ್ಟಿಕೊಡುವ, ಪ್ರೀತಿಯ ನೆಲೆಗಳನ್ನು ಅರ್ಥೈಸಲು ಸಹಕರಿಸುವ ಕನ್ನಡ ಕಾವ್ಯ ಪರಂಪರೆಯಲ್ಲಿನ ಕೆಲವು ಪ್ರಸಂಗಗಳನ್ನು ನಿದರ್ಶನಕ್ಕಾಗಿ ಗಮನಿಸುವುದು ಮುಖ್ಯವಾಗುತ್ತದೆ.

ಪಂಪ, ಪೊನ್ನ, ರನ್ನ, ನಾಗಚಂದ್ರ, ಜನ್ನ, ಚಾಮರಸ, ನಾಗವರ್ಮ, ಮೊದಲಾಗಿ ಇನ್ನೂ ಅನೇಕ ಪ್ರಾಚೀನ ಕವಿಗಳು ಮತ್ತು ಸಮಕಾಲೀನ ಕವಿಗಳೂ ಪ್ರೀತಿಯ ಚಿಂತನೆ ನಡೆಸಿದ್ದಾರೆ. ಪ್ರೀತಿಯ ಸ್ವರೂಪವನ್ನು ತೆರೆದಿರಿಸುವ ಅನೇಕ ರೋಚಕವಾದ ಅದ್ಭುತವಾದ ಪ್ರಸಂಗಗಳನ್ನು ತಮ್ಮ ಕಾವ್ಯಗಳಲ್ಲಿ ವಿವರಿಸಿದ್ದಾರೆ. ಅನೇಕ ಸಂದರ್ಭಗಳಲ್ಲಿ ಪ್ರೀತಿಯ ಹಿಂದೆ ಇರಬಹುದಾದ ಉದ್ದೇಶಗಳನ್ನು ಅನಾವರಣ ಗೊಳಿಸಿದ್ದಾರೆ. ಆದ್ದರಿಂದಲೇ ಕನ್ನಡ ಕಾವ್ಯ ಪರಂಪರೆಯಲ್ಲಿನ ಕೆಲವು ಕಾವ್ಯ ಪ್ರಸಂಗಗಳನ್ನು ಕವಿಗಳು ಚಿತ್ರಿಸಿರುವ ರೀತಿಯಲ್ಲಿಯೇ ಗಮನಿಸುವುದು ಗ್ರಹಿಸುವುದು ಸೂಕ್ತವೆನಿಸುತ್ತದೆ.

ಮೊದಲಿಗೆ ಪಂಪನ ಕಾವ್ಯಗಳಲ್ಲಿನ ಕೆಲವು ಸನ್ನಿವೇಶಗಳನ್ನು ಗಮನಿಸಬಹುದು.



ನೆಲೆ-೧

# ಲಲಿತಾಂಗ-ಸ್ವಯಂಪ್ರಭೆ

## (ಕೆಮ್ಮನುಪೇಕ್ಷಿಸಿ ನೋಡುತಿರ್ಪಿರೇ )

ಪಂಪ ಕನ್ನಡದ ಅಗ್ರಕವಿ; ಆದಿಕವಿ; ಜೈನ ಮತಾವಲಂಬಿ. ಅದ್ಭುತ ಪ್ರತಿಭಾವಂತ. ಕಾವ್ಯ ಮಾರ್ಗ ಪ್ರತಿಪಾದಕ. ತಾನು ಪ್ರತಿಸಿಧಿಸುವ ಜೈನಮತ ನಿಷ್ಠೆಯ ಪ್ರತೀಕವಾಗಿ 'ಆದಿಪುರಾಣ'ವೆಂಬ ಧಾರ್ಮಿಕ ಕಾವ್ಯವೊಂದನ್ನು ರಚಿಸಿದ. ಜೈನಧರ್ಮಕ್ಕೆ ಹೊರತಾದ ಭಾರತ ಕತೆಯನ್ನಾಧರಿಸಿ, ತನ್ನ ಆಶ್ರಯದಾತನಾದ ಅರಿಕೇಸರಿಯ ಬಗೆಗಿನ ಸ್ವಾಮಿನಿಷ್ಠೆಯ ಪ್ರತೀಕವಾಗಿ, ಅರಿಕೇಸರಿಯನ್ನು ಅರ್ಜುನನೊಡನೆ ಅಭೇದ ಕಲ್ಪಿಸಿ 'ವಿಕ್ರಮಾರ್ಜುನ ವಿಜಯವೆಂಬ' ಲೌಕಿಕ ಕಾವ್ಯವೊಂದನ್ನು ಬರೆದ.

'ಆದಿಪುರಾಣ' ಪ್ರಥಮ ತೀರ್ಥಂಕರನಾದ ವೃಷಭ ದೇವನ ಜನ್ಮ ಜನ್ಮಾಂತರದ ಕಥೆಯಾಗಿದೆ. ಕರ್ಮಬಂಧನ ಬಿಡಿಸಿಕೊಳ್ಳಲು, ಜೀವನ್ಮುಕ್ತನಾಗಲು , ಜೈನ ಧರ್ಮದಲ್ಲಿ ಜೀವನು ಭವಾವಳಿ ಅಥವಾ ಜನ್ಮ ಜನ್ಮಾಂತರಗಳ ಮೂಲಕ ಹಾದು ಬರುತ್ತಾ ಒಂದೊಂದು ಜನ್ಮದಲ್ಲಿ ಅವನು ಮಾಡುವ ಪುಣ್ಯ ವಿಶೇಷಗಳಿಂದ, ಸಮ್ಯಕ್ತ್ವ ಜ್ಞಾನದಿಂದ ಸಂಸಾರ ದೂರನಾಗುತ್ತಾ ಜೀವವಿಕಾಸದ ಕೊನೆಯ ಹಂತವಾದ ತೀರ್ಥಂಕರತ್ವವನ್ನು ತಲುಪುತ್ತಾನೆ.

ಈ ಜೀವ ವಿಕಾಸ ಪ್ರಕ್ರಿಯೆಯಲ್ಲಿ, ಜನ್ಮಜನ್ಮಾಂತರಗಳಲ್ಲಿ ಹಾದು ಬರುತ್ತಿದ್ದ ವೃಷಭ ಹನ್ನೊಂದನೆ ಜನ್ಮದಲ್ಲಿ ಜಯವರ್ಮನಾಗಿ ಹುಟ್ಟುತ್ತಾನೆ. ಆದರೆ ರಾಜ್ಯದ ಆಕಾಂಕ್ಷೆಯನ್ನು ಎದೆಯಲ್ಲಿ ಹೊತ್ತಿದ್ದವನು, ಹಿರಿಯನಾದರೂ ತನ್ನನ್ನು ಅಸಮರ್ಥನೆಂದು ಭಾವಿಸಿ, ತಂದೆ ಕಿರಿಯ ಮಗನಿಗೆ ಪಟ್ಟ ಕಟ್ಟಲು, ಮನಸ್ಸಿಗೆ ಆದ ಆಘಾತವನ್ನು ತಡೆದುಕೊಳ್ಳಲಾರದೆ ಹೋಗುತ್ತಾನೆ. ರಾಜ್ಯ ಭೋಗಗಳ ಬಗ್ಗೆ ಅಪಾರ ಪ್ರೀತಿಯಿದ್ದವನಿಗೆ ಅದು ಕೈ ತಪ್ಪಿಹೋಗಲು ವಿಲಿ ವಿಲಿ ಒದ್ದಾಡುತ್ತಾನೆ. ಮುಂದಿನ ಜನ್ಮದಲ್ಲಾದರೂ ರಾಜ್ಯಸುಖಾನುಭವಗಳು ತನಗೆ

ದೊರೆಯಬೇಕೆಂಬ ಹಂಬಲದೊಂದಿಗೆ ಜೈನದೀಕ್ಷೆ ಪಡೆದು ತಪಸ್ಸನ್ನು ಆಚರಿಸುತ್ತಾನೆ. ದಿಗಂಬರನಾಗಿ ತಪೋನಿರತನಾಗುವಲ್ಲಿ ಕಿತ್ತ ಕೂದಲನ್ನು ಮರೆಮಾಡಲೆಂದು ಹಾವಿನ ಹುತ್ತದಲ್ಲಿ ಕೈಯಿರಿಸುತ್ತಾನೆ.ಆ ಕ್ಷಣ ಹಾವಿನ ಹುತ್ತದೊಳಗಿಂದ ಹೊಗೆಯನ್ನು ಉಗುಳುತ್ತಾ, ಕಿಡಿಗಳನ್ನು ಕಾರುತ್ತ ಹೊರಬಂದು ತಪಸ್ವಿಯಾಗಿದ್ದ ಜಯವರ್ಮನನ್ನು ಕಚ್ಚಿತು. ಆದರೆ ಅದೇ ಸಮಯದಲ್ಲಿ ನಲ್ಲೆಯೊಡನೆ ಲಲ್ಲೆ ಮಾಡುತ್ತಾ, ಕಿನ್ನರ ಗಾನ ನರ್ತನಗಳಿಂದ ಆವೃತನಾಗಿ ಮಹೀಧರನೆಂಬ ವಿಯಚ್ಚರೇಂದ್ರ ವಿಮಾನದಲ್ಲಿ ಕಾಣಿಸಿಕೊಂಡ ಸರ್ಪದಂಷ್ಟ್ರನಾದುದು ನೆನಪಾಗಿ, ತಾನು ಸಾಯಲಿರುವುದನ್ನು ಗಮನಿಸಿ, ಮುಂದಿನ ಜನ್ಮದಲ್ಲಿ ಅವನಂತೆಯೇ ಹುಟ್ಟಿ ಅವನು ಅನುಭವಿಸುತ್ತಿರುವ ಎಲ್ಲಭೋಗಭಾಗ್ಯಗಳೂ ತನ್ನವಾಗಬೇಕೆಂದು, ತನ್ನ ತಪಃಫಲ ಸಾರ್ಥಕವಾದಲ್ಲಿ ಖಂಡಿತವಾಗಿಯೂ ವಿಧ್ಯಾಧರನಾಗಿ ಹುಟ್ಟುವೆನೆಂಬ ಭರವಸೆಯನ್ನೂ ಹೊತ್ತು ಅಸುನೀಗುತ್ತಾನೆ. ತಪದಿಂದ ಗಳಿಸಿಕೊಂಡಿದ್ದ ಫಲವನ್ನು, ಸುಖಭೋಗದ ಅಲ್ಪ ಫಲಕ್ಕಾಗಿ ಹಾಳು ಮಾಡಿಕೊಳ್ಳುತ್ತಾನೆ.

ಮುಂದೆ ಮಹಾಬಲನಾಗಿ ಹುಟ್ಟಿ ಅಪಾರ ಭೋಗಭಾಗ್ಯ ರಾಜ್ಯ ಸಂಪದಗಳನ್ನು ಅನುಭವಿಸುತ್ತಾನೆ. ಆದರೂ ಅವನ ಕಾಮ ಭೋಗ ಪ್ರೀತಿಗೆ ಕೊನೆಯಿಲ್ಲವಾಗುತ್ತದೆ. ಅನುಭವಿಸಿದಷ್ಟೂ ಅನುಭವಿಸಬೇಕೆಂಬ ಹಂಬಲ. ಜೀವನಕ್ಕೆಗೆ ಬೇಕಾದ ಧರ್ಮೋಪದೇಶಗಳು ಅವನಿಗೆ ಬೇಡವಾಗುತ್ತದೆ. ಆದರೆ ದುಃಸ್ವಪ್ನಗಳು ಅಮಂಗಳಕರವೆನಿಸುತ್ತವೆ. ತನ್ನ ಮಂತ್ರಿಯಾದ ಸ್ವಯಂಬುದ್ಧನು ಸ್ವಪ್ನ ವಿವರಗಳನ್ನು ಮತ್ತು ಕೇವಲ ಒಂದೇ ಒಂದು ತಿಂಗಳು ಮಾತ್ರವೇ ಅವನ ಆಯುಷ್ಯವಿದೆಯೆಂದು ತಿಳಿಸಿದಾಗ, ಜ್ಞಾನೋದಯವಾಗಿ, ವ್ರತ ನಿರತನಾಗಿ ಮರಣ ಹೊಂದಿ, ಮುಂದೆ ಲಲಿತಾಂಗದೇವನಾಗಿ ಹುಟ್ಟುತ್ತಾನೆ.

ಸಿರೀಕ್ಷೆಯಂತೆ ಮುಂದಿನ ಈಶಾನ ಕಲ್ಪದಲ್ಲಿ ಕೋಟಿ ಸೂರ್ಯಪ್ರಭೆಯನ್ನೊಳಗೊಂಡ ದೇಹದೊಂದಿಗೆ ಹುಟ್ಟಿದನು. ಹೊಳೆ ಹೊಳೆವ ರತ್ನ ಕಾಂತಿ ಕಿರಣಗಳಂತಹ ದೇಹವಿದ್ದುದರಿಂದ ಲಲಿತಾಂಗನೆಂಬ ಹೆಸರನ್ನು ಪಡೆದ. ಅವನ ಮೈಮೇಲೆ ದಿವ್ಯ ಮಾಲೆಗಳಿದ್ದವು. ದೇವಲೋಕ, ದಿವ್ಯ ಸೌಧಗಳು ಅವನಿಗೆ ಪೂರ್ವಪುಣ್ಯದಿಂದ ಲಭಿಸಿದ್ದವು.

ಅವನು ಹುಟ್ಟಿದ್ದು ಕೂಡ ವಿಚಿತ್ರವಾಗಿತ್ತು. ಗಾಢ ನಿದ್ರೆಯಿಂದ ಎಚ್ಚೆತ್ತವನಂತೆ ಹುಟ್ಟಿದ. ಹುಟ್ಟಿದ ಕೂಡಲೇ ಮುಚ್ಚಿದ್ದ ಕದಗಳು ತೆರೆದುಕೊಂಡವು ಸುಗಂಧವು ಪಸರಿಸಿತು. ಪ್ರಾಸಾದಗಳಲ್ಲಿ ರತ್ನ ತೋರಣಗಳು ಕಂಗೊಳಿಸಿದವು. ದೇವಲೋಕದ ನಾಟಕ ಶಾಲೆಯಲ್ಲಿ ವಾದ್ಯಗಳು ಮೊಳಗಿದವು. ಪುಷ್ಪವೃಷ್ಟಿಯಾಯಿತು. ತಾಳವಾದ್ಯಗಳ ನಡುವೆ ಬಳುಕುವ ಬಳ್ಳಿಗಳಂತೆ ಬಳುಕುತ್ತಾ, ವಿವಿಧ ಭಾವಭಂಗಿಗಳನ್ನು ಪ್ರದರ್ಶಿಸುತ್ತಾ ಕನ್ನಡಿ, ಕಲಶ, ಛತ್ರಿ, ಚಾಮರಗಳನ್ನು ಹಿಡಿದು ಬರುತ್ತಿರುವ ಅಪ್ಸರೆಯರನ್ನು, ಮಂಗಳಾಕ್ಷತೆಯನ್ನು ಹಾಕಲು ಬರುತ್ತಿದ್ದ ದೇವತಾ ಸ್ತ್ರೀಯರನ್ನು, ನೋಟದಿಂದಲೇ ಮನ್ಮಥನ ಬಾಣಾಘಾತಕ್ಕೆ ಗುರಿಪಡಿಸುವಂತಿದ್ದ ಪರಿವಾರ ದೇವಿಯರನ್ನು, ಚತುರಭಾಷಿತರಾದ ದೇವ ವಿಲಾಸಿನಿಯರನ್ನು ಕಂಡ ಲಲಿತಾಂಗ ಒಂದುಕ್ಷಣ ಭ್ರಮಿತನಾದನು. ತನ್ನ ಪೂರ್ವಾಪರಗಳ ಬಗ್ಗೆ ಚಿಂತಿಸತೊಡಗಿದ. ಈ ವಿಮಾನ, ವೈಭವ ವಿಲಾಸ, ಸಿರಿಸಂಪತ್ತು ಎಲ್ಲಿಂದ ಬಂತೆಂದು ಯೋಚಿಸತೊಡಗಿದಾಗ ಪೂರ್ವಜನ್ಮ ಸ್ಮರಣೆಯಾಗಿ ಎಲ್ಲವೂ ಸ್ಪಷ್ಟವಾಗಿ ಹೊಳೆಯಿತು.ತಾನು ದೇವತೆಯಾಗಿ ಹುಟ್ಟಿರುವುದು ಮನವರಿಕೆಯಾಯಿತು. ಇಂತಹ ಜನ್ಮ ಲಭ್ಯ ಸಾಧ್ಯವಾದದ್ದು ಸ್ವಯಂಬುದ್ಧನ ಜಿನೋಪದೇಶದಿಂದಲೇ ಎಂಬುದನ್ನೂ ಅರಿತನು. ಅಪ್ಸರಲ್ಲಿ ಮಹತ್ತರ ದೇವಿಯರು ಮುತ್ತು ಮಾಣಿಕ್ಯದ ತಟ್ಟೆಗಳನ್ನು ಹಿಡಿದು ಮಂತ್ರಾಕ್ಷತೆಯೊಂದಿಗೆ ಬಂದು ಲಲಿತಾಂಗನಿಗೆ ನಮಸ್ಕರಿಸಿ ಅವನಿಗೆ ಎಲ್ಲವನ್ನೂ ವಿವರಿಸಿ ಹೇಳಿದರು.-

ಇದು ನನಗೆ ಪೂರ್ವಪುಣ್ಯದಿಂದ ಲಭ್ಯವಾದ ವಿಮಾನ. ಇಲ್ಲಿರುವವರೆಲ್ಲ ದೇವ ಸಮೂಹ. ಈ ನರ್ತಕಿಯರು ನನ್ನ ಪಾದಸೇವೆಗೆ ಸಿದ್ಧರಿದ್ದಾರೆ. ಇದು ಸುಖದ ಕೊನೆಯ ಹಂತ.ಅನುರಾಗದ ಮೊದಲು ಅಭ್ಯುದಯದ ಕಡಲು. ದಿವಿಜೇಂದ್ರ ಲೋಕದ ಸಾರ ಸರ್ವಸ್ವ ಜಿನ ಪ್ರಸಾದ ಉಂಟಾಗಿರುವುದರಿಂದ ಎಲ್ಲ ಚೈತ್ಯಾಲಯಗಳಿಗೆ ಭಕ್ತಿಯಿಂದೆರಗು' ಎಂದು ಸೂಚಿಸಿ ಮರಳಿದರು.

ಲಲಿತಾಂಗ ಅವರ ಆದೇಶದಂತೆ, ಭಕ್ತಿಯಿಂದ ನಡೆದುಕೊಂಡ. ಆ ಲೋಕವನ್ನೆಲ್ಲಾ ಸುತ್ತಾಡಿ, ಸಂದರ್ಶಿಸಿ ಬಂದ. ಕಾಂತಿಯುಕ್ತವಾದ

ದಿವ್ಯದೇಹವಲ್ಲದೆ ನಿದ್ದೆ, ಹಸಿವು, ಆಲಸಿಕೆ, ದುಃಖ, ವಿಷಾದ, ಶೋಕ, ಮುಪ್ಪು ಮುಂತಾದವುಗಳಿಂದ ಮುಕ್ತನಾಗಿ ಸಾಗರದಷ್ಟು ಕಾಲ ಆಯುಷ್ಯ ಪಡೆದಿದ್ದ.

ದೇವನಾದರೇನು, ಸ್ವಯಂಪ್ರಭೆ, ಕನಕಮಾಲೆ, ಕನಕಲತೆ, ವಿದ್ಯುಲ್ಲತೆಯರೆಂಬ ನಾಲ್ಕು ಮಂದಿ ಮಹಾದೇವಿಯರನ್ನು ಪ್ರೀತಿಸಿದ. ಅವರೊಂದಿಗೆ ಸುರತಸುಖದಲ್ಲಿ ಮುಳುಗಿ ಕಾಲದ ಅರಿವೇ ಇಲ್ಲದಂತಾದ. ಅವರೊಂದಿಗೆ ಅವನು ಅನುಭವಿಸುತ್ತಿದ್ದ ಸುಖಕ್ಕೆ ಎಣೆಯಿಲ್ಲವಾಯಿತು. ನಗೆ, ಹಾಸ್ಯ-ವಿನೋದ ಲಲ್ಲೆಗಳಿಂದ ಅವರನ್ನು ತಣಿಸಿದ. ತಾನೂ ತಣಿದ. ಅವನ ವಿಮಾನದಲ್ಲೇ ಹುಟ್ಟಿದ ಅನೇಕ ಸ್ವಯಂಪ್ರಭೆಯರು ತೀರಿಕೊಂಡರು. ಆದರೆ ಅವನ ಮಹಾದೇವಿಯರಲ್ಲಿ ಒಬ್ಬಳಾದ ಸ್ವಯಂಪ್ರಭೆಗೆ ಲಲಿತಾಂಗನ ಹೃದಯದಲ್ಲಿ ಪ್ರೀತಿಯನ್ನು ಹುಟ್ಟಿಸಲು ಮತ್ತೊಂದು ಜನ್ಮ ತಳೆದು ಬರುತ್ತಾಳೆ. ಲಲಿತಾಂಗನಿಗೆ ಅವಳ ರೂಪು, ಲಾವಣ್ಯಗಳು ಹುಚ್ಚನನ್ನಾಗಿಸುತ್ತವೆ. ಅವನಿಗೆ ಅವಳು ಮನ್ಮಥನ ಕೈಪಿಡಿಯಂತೆ, ಪುಣ್ಯದೊಂದು ರಾಶಿಯಂತೆ ಕಾಣುತ್ತಾಳೆ. ಒಂದು ಕ್ಷಣದ ಅಗಲಿಕೆಯೂ ಮಾರಣಾಂತಿಕವೆನಿಸುತ್ತದೆ. ವ್ರತನೇಮಗಳಿಂದ ಗಳಿಸಿಕೊಂಡ ಇಂದ್ರಲೋಕದ ಸಂಪತ್ತೂ ದೇವಾಂಗನೆಯರಿಂದ ಮೊದಲು ಗಳಿಸಿದ ಸುಖವೂ ಸ್ವಯಂಪ್ರಭೆಯಿಂದ ದೊರಕುತ್ತಿರುವ ಸುಖಕ್ಕೆ, ಆನಂದಕ್ಕೆ ಸಾಟಿಯಿಲ್ಲ. ಲಲಿತಾಂಗನ ಎದೆಗೊರಗಿ ಅನುರಾಗವನ್ನು ಉದ್ದೀಪಿಸುತ್ತಾ, ಶೃಂಗಾರ ರಸಾಮೋದವನ್ನು ಕಲ್ಪಿಸುತ್ತಿದ್ದ ಸ್ವಯಂಪ್ರಭೆಯನ್ನು ಸಾವಿರ ನಾಲಿಗೆಗಳೂ ಹೊಗಳಲಾರವು. ಅವಳ ಆದಮ್ಯ ಪ್ರೀತಿಯಲ್ಲಿ ಕರಗುತ್ತಾ, ಸಮುದ್ರ ತಟಾರಣ್ಯಗಳಲ್ಲಿ ಕ್ರೀಡಿಸುತ್ತಾ ಇನ್ನಿಲ್ಲದ ಸುಖವನ್ನು ಅನುಭವಿಸುತ್ತಾ ಅಮರ ಸ್ತ್ರೀಯರ ಮುಖ ಕಮಲಗಳ ಬಂಡಿನಿಂದ ಮತ್ತನಾದ ದುಂಬಿಯಾಗಿದ್ದ. ಅವನಿಗಂತೂ ನಿತ್ಯ ಕಾಮೋತ್ಸವ ಸಂಭ್ರಮವಾಗಿತ್ತು. ಅನುಭವಿಸಿದಷ್ಟೂ ಅರಕೆಯೆನಿಸುತ್ತೇ ಹೊರತು ತೃಪ್ತಿ, ಸಂತೃಪ್ತಿಗಳಿಗೆ ಎಡೆಯಿಲ್ಲವಾಗಿತ್ತು. ದೇವನಾಗಿದ್ದರೂ ಎಲ್ಲಕ್ಕೂ ಒಂದು ನಿಗದಿತ ಗಡುವು ಇದ್ದೇ ಇರುತ್ತದೆ. ಪುಣ್ಯಯೋಗದಿಂದ ಸ್ವರ್ಗಭೋಗವನ್ನು ಅನುಭವಿಸುತ್ತಿದ್ದ ಲಲಿತಾಂಗನ ಸಾಗರ ಕಾಲದ ಆಯುಷ್ಯದಲ್ಲಿ ಕೇವಲ ಆರು ತಿಂಗಳು ಮಾತ್ರವೇ ಉಳಿದಿರುತ್ತದೆ. ಅವರ ಪೂರ್ವ

ಸೂಚನೆಯಂತೆ ಮುಡಿದ ಪಾರಿಜಾತ ನಮೇರಾದಿ ಹೂವಿನ ದಂಡೆಗಳು ಬಾಡಿದವು. ಅಂಗಕಾಂತಿ ಕುಂದಿತು. ಧರಿಸಿದ್ದ ಆಭರಣಗಳು ಮಂಕಾದವು. ಆಕಳಿಕೆ ಉಂಟಾಯಿತು. ಉದ್ವೇಗ ಹೆಚ್ಚಿತು. ಮುಖವು ಸಪ್ಪೆಯಾಯಿತು. ಇದೆಲ್ಲವೂ ಅವನಿಗೆ ಮುಂದೆ ಬರಲಿದ್ದ ಸಾವಿನ ಸಂಕೇತವಾಗಿದ್ದವು. ಉದ್ಯಾನವನದ ಕಲ್ಪವೃಕ್ಷಗಳು ಲಲಿತಾಂಗನು ಸಾವಿನ ಭೀತಿಯಿಂದ ನಡುಗುವಂತೆ ನಡುಗುತ್ತಿದ್ದವು. ಅವನ ಆಗಲಿಕೆಗಾಗಿ ನೀರವವಾಗಿರುವಂತೆ ನೀರವವಾಗಿದ್ದವು. ಲಲಿತಾಂಗನ ಭೋಗಪ್ರೀತಿ, ಮಡದಿ ಸ್ವಯಂಪ್ರಭೆಯ ಪ್ರೀತಿ ಊಹೆಗೂ ಮೀರಿದಷ್ಟು ಗಾಢವಾಗಿತ್ತು. ಅವುಗಳಿಂದ ದೂರ ಹೋಗುವ ವಿಚಾರವೇ ಅವನಿಗೆ ಅಸಹನೀಯವಾಗಿತ್ತು. ದೇವನಾಗಿದ್ದರೂ ಸಾಮಾನ್ಯ ಮನುಷ್ಯನ ಹಾಗೆ ಸಾವಿಗೆ ಹೆದರಿ, 'ಕಲ್ಪವೃಕ್ಷಗಳೇ, ನಂದನವನಗಳೇ, ವಿಮಾನದ ನೆಲಗಟ್ಟುಗಳಲ್ಲಿನ ಸುರತಾಲಯಗಳೇ' ವಿಲೋಲ ಕಟಾಕ್ಷಗಳನ್ನು ಬೀರುವ ಸುಂದರ ಪರಿವಾರದೇವಿಯರೇ ! ಯಮನು ನನ್ನನ್ನು ತ್ವರೆಯಿಂದ ಎಳೆದೊಯ್ಯುತ್ತಿದ್ದರೂ ನಿವಾರಿಸದೆಯೇ ಉಪೇಕ್ಷಿಸಿ ನೋಡಿತ್ತಿರುವಿರಿ, ಅಲ್ಲವೇ?' ಎಂದು ,ಅವು ನಿರ್ಜೀವವೆಂಬುದನ್ನು ಮರೆತು ಆಕ್ಷೇಪಿಸುತ್ತಾನೆ.ತಾನು ಎಷ್ಟೊಂದು ಗಾಢವಾಗಿ ಪ್ರೀತಿಸುತ್ತಿರುವ ಕಾಂತೆ ಸ್ವಯಂಪ್ರಭೆಯಾದರೂ ತನ್ನನ್ನು ರಕ್ಷಿಸಿಕೊಳ್ಳಬಾರದೇ ಎನಿಸಿ, "ಸುರತಾಮೃತದಲ್ಲಿ ಸಂತೋಷದ ಕೊನೆಯನ್ನು ಮುಟ್ಟಿ ತಣಿದಿವೆ ನಮ್ಮ ಮನ. ದೇಹಗಳೆರಡಾಗಿದ್ದರೂ ಪ್ರಾಣವೊಂದೆಂಬಂತೆ ಪ್ರೀತಿಯಿಂದ ಅಂಟಿಕೊಂಡಿವೆ ಅವು. ಹೀಗಿದ್ದರೂ ಎಲೈ ಸ್ವಯಂಪ್ರಭೆ ! ನಿನ್ನೊಡನೆ ಭೋಗಿಸಲು ಅವಕಾಶವೀಯದೆಯೆ. ಯಮನೆಂಬ ಭೂತ ನನ್ನನ್ನು ಒಯ್ಯುತ್ತಿದ್ದರೂ ಬಿಡಿಸದಿರುವೆಯಲ್ಲಾ !" ಎಂದು ಅಂಗಲಾಚಿ, ದೂರುತ್ತಾನೆ.

ಲಲಿತಾಂಗನ ಆಕ್ರಂದನ, ವಿಲಾಪಗಳು ಮುಗಿಲು ಮುಟ್ಟುತ್ತವೆ. ಅವಮ್ಯವಾದ ಭೋಗ ಪ್ರೀತಿ, ರತಿಪ್ರೀತಿ, ಸತಿಪ್ರೀತಿಗಳು ಅವನ ದಿವ್ಯತೆಯನ್ನೇ ಮರೆಸುತ್ತವೆ. ಅತಿ ಪ್ರೀತಿ, ಮೋಹಗಳು ಅವನ ಎದೆಯನ್ನು ಹಿಂಡಿ ನೋವಿನ ಕಡಲನ್ನು ಉಕ್ಕಿಸುತ್ತವೆ. ಆಸನ್ನ ಭವ್ಯನಾಗಲು ಹೊರಟ ಲಲಿತಾಂಗನೇ ಬದುಕಿ ಉಳಿಯಲು, ಸುಖ ಭೋಗಗಳನ್ನು ಅನುಭವಿಸಲು ಹಾತೊರೆಯುತ್ತಾನೆ.

ಅವನ ವಿಲಾಪಕ್ಕೆ ವಿದಾಯ ಹೇಳಲು, ಬದಕಿನ ನಶ್ವರತೆಯನ್ನು ಅರುಹಲು ಸಾಮಾನಿಕ ದೇವರುಗಳೇ ಬರಬೇಕಾಗುತ್ತದೆ. ಸಾವೆಂಬುದು ಅವನೊಬ್ಬನಿಗೇ ಅಲ್ಲ. ಅಮರರು, ಅಮರ ಸ್ತ್ರೀಯರೂ ಎಲ್ಲರೂ ಈ ಅವಸ್ಥೆಗೆ ಒಳಗಾಗಲೇ ಬೇಕು.ಹುಟ್ಟು ಸಾವು, ಮುಪ್ಪು ಮತ್ತು ಶೋಕಾಗ್ನಿಗಳಿಂದ ಬೇಯದವರು ಯಾರು ತಾನೆ ಇರಲು ಸಾಧ್ಯ. ಆದ್ದರಿಂದ ಜನನ ಮರಣಗಳಿಂದ ಮುಕ್ತರಾಗಲು, ಜಿನ ಚೈತ್ಯಾಲಯ ಜಿನಪಾದ ಪದ್ಮಗಳಿಗೆ ಭಕ್ತಿಯಿಂದ ನಡೆದುಕೊಳ್ಳುವುದೊಂದೇ ದಾರಿ' ಎಂದು ಹೇಳಿ ಸಮಾಧಾನ ಪಡಿಸಿದರು. ಇದರಿಂದ ಅವನ ಮನಸ್ಸಿಗೊಂದಿಷ್ಟು ಸಮಾಧಾನವಾಯಿತು. ದೃಢಚಿತ್ತದಿಂದ ಜಿನನನ್ನು ಆರಾಧಿಸಿದನು. ಕಡೆಗೆ ಅಚ್ಯುತ ಸ್ವರ್ಗದಲ್ಲಿ ಇರುವ ಜಿನೇಂದ್ರನನ್ನು ಪ್ರೀತಿಯಿಂದ ಪೂಜಿಸಿ, ನೋಡ ನೋಡುತ್ತಿದ್ದಂತೆ ಲಲಿತಾಂಗ ಶರತ್ಕಾಲದ ಮೇಘದಂತೆ ಅದೃಶ್ಯನಾಗಿ ಹೋದನು.

ಯಾವುದೇ ಧಾರ್ಮಿಕ ಹಿನ್ನಲೆಯ ಕೃತಿಯಾದರೂ, ಕೃತಿಯಲ್ಲಿನ ಕಥಾನಾಯಕರು ದೇವ, ಮಾನವರೇ ಆಗಿದ್ದರೂ ' ಪ್ರೀತಿ'ಯ ಸ್ವರೂಪದಲ್ಲಿ ಬದಲಾವಣೆಯಿಲ್ಲ.ಪ್ರೀತಿಯೆದೆಯಾಳದಲ್ಲಿ ಇರುವ ಭಾವಸ್ಥಿತಿಗಳಲ್ಲಿ ಒಂದಾದ 'ನೋವೂ' ಬೇರೆಯಾಗುವುದಿಲ್ಲ.' ಪ್ರೀತಿ ಅತಿಯಾದಷ್ಟೂ, ಪ್ರೀತಿಸುವವರ ಅಗಲಿಕೆ ತರುವ ನೋವು ಅಸಹನೀಯವೇ ಆಗಿರುತ್ತದೆ.



ಸೆಲೆ - ೨

# ವಜ್ರಜಂಘ ಶ್ರೀಮತಿ

## (ಪ್ರೀತಿಗೆ ಎಲ್ಲೆ ಎಲ್ಲಿ?) ಅಥವಾ ಕಾಳಾಗರು ಕಾಳೋರಗವಾಯ್ತು

ಹಿಂದಿನ ಜನ್ಮದ ಲಲಿತಾಂಗನೇ ಈ ಜನ್ಮದಲ್ಲಿ ವಜ್ರಜಂಘನಾಗಿಯೂ ಮಡದಿಯ ಪ್ರೀತಿಯನ್ನು ಎದೆಯಲ್ಲಿರಿಸಿಕೊಂಡೇ ಹುಟ್ಟುತ್ತಾನೆ. ಲಲಿತಾಂಗನ ಸಾವಿನ ನಂತರ ಅವನ ಅಗಲಿಕೆ ಸ್ವಯಂಪ್ರಭೆಗೆ ಸಹಿಸಲಸಾಧ್ಯವೆನಿಸುತ್ತದೆ. ಒಂಟಿತನದ ಭಯಂಕರತೆ, ತೀರದ ಸುರತ ಸುಖದ ದಾಹ ಅವಳನ್ನು ಹುಚ್ಚಳಾಂತಾಗಿಸುತ್ತದೆ. ಯಾವುದರಲ್ಲಿಯೂ ಆಸಕ್ತಿ ಇಲ್ಲದಂತಾಗಿಸುತ್ತದೆ. ಸ್ವರ್ಗವೂ ನಿರ್ಜನಾರಣ್ಯವಾಗಿ ಭಾಸವಾಗುತ್ತದೆ. ತಾನು ಮತ್ತು ಲಲಿತಾಂಗ ಕಳೆದ ಸುಖದ ಕ್ಷಣಗಳನ್ನು ನೆನಪು ಮಾಡಿಕೊಂಡು ಒಂದೇ ಸಮನೆ ವಿಲಪಿಸುತ್ತಾಳೆ.ಇಂತಹ ಪರಿಸ್ಥಿತಿಯಲ್ಲಿ ಮಹತ್ತರ ದೇವಿಯರು ಬಳಿಸಾರಿ ಸಾಂತ್ವನ ಹೇಳಿ ಜಿನಭಕ್ತಿಯುಪದೇಶಿಸಿ ಹೋಗುತ್ತಾರೆ. ಮುಂದಿನ ಜನ್ಮದಲ್ಲಿ ಲಲಿತಾಂಗನನ್ನೇ ಮರಳಿ ಗಂಡನಾಗಿ ಪಡೆಯುವೆ ಎಂಬ ಭರವಸೆಯ ಮಾತನ್ನು ನೆನೆದು ಗುರುಪಂಚಕವನ್ನು ಸ್ಮರಿಸುತ್ತಾ ದೇಹತ್ಯಾಗ ಮಾಡಿ ಜಂಬೂ ದ್ವೀಪದ ಪೂರ್ವ ವಿದೇಹದ ಪುಂಡರೀಕಿಣಿ ಪಟ್ಟಣದ ರಾಜನಾದ ವಜ್ರದಂತ ಲಕ್ಷ್ಮೀಮತಿ ದಂಪತಿಗಳಿಗೆ ಶ್ರೀಮತಿ ಎಂಬ ಮಗಳಾಗಿ ಜನಿಸುತ್ತಾಳೆ. ಯೌವ್ವನಾವಸ್ಥೆಯನ್ನು ತಲುಪುತ್ತಿದ್ದಂತೆ, ಕಾಮನ ಮೋಹ ಪಾಶದಂತೆ, ಕಾಮನಕೈದುವಿನಂತೆ, ಕಾಮನ ಕೈಗನ್ನಡಿಯಂತೆ ಕಾಣಿಸತೊಡಗಿದಳು ನೋಡುವವರಿಗೆ ಅವಳು ಮಾನುಷಿಯಂತಲ್ಲದೆ ಸುರಕಾಂತೆಯಾಗಿ ಕಾಣಿಸುತ್ತಿದ್ದಳು.

ಇಂತಹ ಅಪರ ರತಿಯಂತಿದ್ದ ಶ್ರೀಮತಿ ಪಂಡಿತೆ ಎಂಬುವಳಿಂದ ಸಕಲ ಶಾಸ್ತ್ರ ಕಲೆಗಳನ್ನು ಕಲಿತು ವಿದ್ವತ್ಪ್ರತಿಭೆಗಳ ಸಾಕಾರ ಮೂರ್ತಿಯಾದಳು. ಒಮ್ಮೆ ತನ್ನ ಕನ್ಯಾಂತಃಪುರದ ಕೊಠಡಿಯಲ್ಲಿ ಮಲ್ಲಿಗೆಯ ಮೃದು ಹಾಸಿನಲ್ಲಿ ಮಲಗಿರುವಾಗ, ಆ ಪಟ್ಟಣದ

ಹೊರವಲಯದ ಸುಂದರ ಉದ್ಯಾನವೊಂದರಲ್ಲಿ ಧ್ಯಾನ ಮಗ್ನರಾದ ಯಶೋಧರ ಗುರುಗಳ ಕೇವಲಜ್ಞಾನೋತ್ಪತ್ತಿಯುತ್ಸವ ನಡೆಯುತ್ತಿತ್ತು. ಅದೇ ಸಮಯದಲ್ಲಿ ವಿಮಾನದಲ್ಲಿ ಸಾಗಿ ಬರುತ್ತಿದ್ದ ದೇವತೆಗಳ ಜೊತೆ ಜೊತೆಯಾಗಿ ಕೇಳಿಬರುತ್ತಿದ್ದ ಕಿರುಗಂಟೆಗಳ ಧ್ವನಿ, ಮಂಗಳಗಾನ ಹೂಗಂಪನ್ನು ಹೊತ್ತು ಬೀಸಿಬಂದ ಮಲಯ ಮಾರುತಗಳಿಂದ ಎಚ್ಚರಗೊಂಡು ಎದ್ದು ಪ್ರಾಸಾದದ ಮೇಲ್ಭಾಗದಲ್ಲಿ ನೋಡಲು ದೇವತೆಗಳು ಬರುತ್ತಿದ್ದುದು ಕಣ್ಣಿಗೆ ಬಿತ್ತು. ಕೂಡಲೆ ಅವಳಿಗೆ ಪೂರ್ವಜನ್ಮ ಸ್ಮರಣೆಯುಂಟಾಗಿ, ಮರೆತಿದ್ದ ಲಲಿಂತಾಗನ ನೆನಪು ಮರುಕಳಿಸಿತು. ಮರುಕ್ಷಣವಲ್ಲಿಯೇ ವಿರಹ, ದುಃಖ, ನೋವು, ವಿಲಾಪಗಳು ಒಮ್ಮೆಲೇ ಮುತ್ತಿದವು. ಅವುಗಳ ಆಕ್ರಮಣವನ್ನು ಸಹಿಸಲಾಗದೆ ಮೂರ್ಛಿತಳಾದಳು. ದಾಸಿಯರೆಲ್ಲ ಗಾಬರಿಗೊಂಡು ಬಳಿಗೆ ಬಂದು ಶೀತ ಸೀಕರಗಳನ್ನು ಸಿಂಪಡಿಸಿ, ಗಾಳಿ ಹಾಕಿ ಉಪಚರಿಸಿದ ನಂತರ ಎದ್ದು ಕುಳಿತಳಾದರೂ ತುಟಿ ಬಿಗಿ ಹಿಡಿದು, ಯಾರೇ ಅವಳ ದುಃಖಕ್ಕೆ ಕಾರಣವೇನೆಂದು ಪ್ರಶ್ನಿಸಿದರೂ ಮೌನ ಮುರಿಯಲಿಲ್ಲ.ಸ್ವತಃ ಅವಳ ತಂದೆ - ತಾಯಿಗಳೇ ವಿಷಯ ತಿಳಿದು ಆತುರದಲ್ಲಿ ಬಂದು ಮಗಳಿಗೆ ಏನಾಗಿದೆಯೋ ಎಂದು ಹೆದರಿ, ಅವಳನ್ನು ಸಮೀಪಿಸಿ, ಮೆಲುಮಾತುಗಳಿಂದ ವಿಚಾರಿಸಿದರೂ ಏನೊಂದನ್ನೂ ಉತ್ತರಕೊಡದೆ, 'ನೀವೇನು ಬೇಕಾದರೂ ಹೇಳಿ, ನಾನಂತೂ ಮಾತನಾಡುವುದಿಲ್ಲ' ಎಂದು ನಿಷ್ಠುರವಾಗಿ ಹೇಳಿಬಿಟ್ಟಳು. ಬಹುಶಃ ಅವಳಿಗೆ ಹೇಳಲು ಸಂಕೋಚವಾಗಿರಬೇಕೆಂದು ಭಾವಿಸಿ, ಪಂಡಿತೆಯನ್ನು ಕರೆದು, ಕಾರಣವನ್ನು ವಿಚಾರಿಸಲು ಹೇಳಿ ಅಲ್ಲಿಂದ ಹೊರಟರು. ಪಂಡಿತೆ ಪ್ರೀತಿಯಿಂದ, ಆತ್ಮೀಯತೆಯಿಂದ ಅವಳ ಮನವೊಲಿಸಿ ನಿಜವಾದ ಕಾರಣವನ್ನು ತಿಳಿಯುತ್ತಾಳೆ.

ಶ್ರೀಮತಿ ಪಂಡಿತೆಗೆ ತನ್ನ ಪೂರ್ವ ಜನ್ಮದ ವೃತ್ತಾಂತವನ್ನು ತಿಳಿಸಿದಳು. ತನ್ನ ಹಿಂದಿನ ಹಲವು ಜನ್ಮಗಳ ನಂತರ ಈಶಾನ ಕಲ್ಪದಲ್ಲಿ ಶ್ರೀ ಪ್ರಭ ವಿಮಾನದಲ್ಲಿ ಲಲಿತಾಂಗನ ಮಡದಿ ಸ್ವಯಂಪ್ರಭೆಯಾಗಿದ್ದುದು, ತಮ್ಮ ನಡುವಿನ ಅನನ್ಯ ಪ್ರೀತಿ, ಅನುಭವಿಸಿದ ಸುಖ ಭೋಗಗಳು, ಲಲಿತಾಂಗನ ಸಾವು, ಇತ್ಯಾದಿ ಎಲ್ಲವನ್ನು ವಿವರಿಸಿ ಹೇಳಿದ ನಂತರ, 'ಲಲಿತಾಂಗನು ದಿವದಿಂದ ಇಳಿದುಬಂದು ಈ ಭೂಮಿಯಲ್ಲಾಗಲೀ,

ಭೂಚರ ಖೇಚರರ ಬಲಗಳ ನಡುವೆಯಲ್ಲಾಗಲೀ, ಮತ್ತೆಲ್ಲಿಯೇ ಆಗಲಿ, ಇದ್ದರೂ ಅವನೊಡನೆ ಸಮಾಗಮ ಸಾಧ್ಯವಾಗುವುದಿಲ್ಲ ಆದ್ದರಿಂದ ನಾನು ಬದುಕುವ ಮಾತು ಸಲ್ಲದು' ಎಂದು ಹತಾಶಳಾಗಿ ನುಡಿದಳು. ಆದರೆ ಪಂಡಿತೆ ಅವಳಿಗೆ ಸಮಾಧಾನ ಹೇಳಿ, ಧೈರ್ಯತುಂಬಿ, ಅವಳು ಸಹಕರಿಸುವುದಾದರೆ, ಲಲಿತಾಂಗ ಯಾವುದೇ ದೇಶದಲ್ಲಿ ಹುಟ್ಟಿರಲಿ ಪತ್ತೆಹಚ್ಚಿ ತರುತ್ತೇನೆ, ಎಂದು ಹೇಳುವುದರ ಜೊತೆಗೆ ಲಲಿತಾಂಗನ ನೆನಪಿದ್ದ ಪಕ್ಷದಲ್ಲಿ ಅವನ ಚಿತ್ರಪಟವೊಂದನ್ನು ಬರೆದು ಕೊಡಲು ಹೇಳಿದಳು. ಶ್ರೀಮತಿ ತನ್ನದೆಯಲ್ಲಿ ಅಚ್ಚಳಿಯದೆ ಮೂಡಿಸಿಕೊಂಡಿದ್ದ ಲಲಿತಾಂಗನ ರೂಪವನ್ನು ಬಣ್ಣ ರೇಖೆಗಳಲ್ಲಿ ಇಳಿಸಿಕೊಟ್ಟಳು. ಜೊತೆಗೆ ಚಿತ್ರಪಟದಲ್ಲಿ ಮೂಡಿಸಿದ್ದ ಕೆಲವು ಅಭಿಜ್ಞಾನಗಳನ್ನು ಅವಳಿಂದ ಕೇಳಿ ತಿಳಿದುಕೊಂಡಳು. ಸಕಲ ಜೀವಿಗಳಿಂದ ಕೂಡಿದ ಜಗತ್ಪವಿತ್ರವಾದ, ಸುಂದರವಾದ ಜಿನಾಲಯಕ್ಕೆ ಬಂದು ಪಟ್ಟಸಾಲೆಯ ಮುಂದೆ ನೇತುಹಾಕಿದಳು. ತನ್ನ ಇಷ್ಟಾರ್ಥಸಿದ್ಧಿಗಾಗಿ ಕಾದು ನಿಂತಳು.

ಇತ್ತ ಶ್ರೀಮತಿಯ ತಂದೆ ವ್ರಜದಂತ ದಿಗ್ವಿಜಯಯಾತ್ರೆಯಿಂದ ಕೀರ್ತಿ, ಸಂಪತ್ತುಗಳನ್ನು ಪಡೆದು ರಾಜಧಾನಿಗೆ ಹಿಂದಿರುಗಿ ಮಗಳಿಗೆ ಹೇಳಿಕಳಿಸುತ್ತಾನೆ. ಬಂದವಳು ತಂದೆಗೆ ನಮಸ್ಕರಿಸಿ ಮ್ಲಾನವದನೆಯಾಗಿ ನಿಂತಿರಲು ವ್ರಜದಂತನೇ ಮಗಳನ್ನು ಮಾತಾಡಿಸಲು ಮುಂದಾಗುತ್ತಾನೆ.' ಮಗಳೇ ನಿನ್ನ ಮನದ ಕತ್ತಲೆ ದೂರವಾಗಿ ನಿನ್ನ ಬದುಕು ಬೆಳಗುತ್ತದೆ. ನಾಳೆ ಅಥವಾ ನಾಳಿದ್ದರೊಳಗೆ ನೀನು ನಿನ್ನ ಜೀವಿತೇಶನನ್ನು ಪಡೆಯುತ್ತೀ. ನನ್ನ ಗುರುಗಳೂ, ಮೂರು ಲೋಕಕ್ಕೂ ಗುರುಗಳಾದ ಯಶೋಧರ ಗುರುಗಳಿಂದ ನನಗುಂಟಾದ ಅವಧಿ ಜ್ಞಾನದ ಮೂಲಕ ನನ್ನ ನಿನ್ನ ನಿನ್ನ ಗಂಡನ ಪೂರ್ವ ವೃತ್ತಾಂತವನ್ನೆಲ್ಲ ಅರಿತಿದ್ದೇನೆ. ಈಗ ನನ್ನ ತಂಗಿಯಾದ ವಸುಂಧರೆಗೂ ನನ್ನ ಮೈದುನನಾದ ವಜ್ರಬಾಹುವಿಗೂ ವಜ್ರಜಂಘನೆಂಬ ಹೆಸರಿನಿಂದ, ನಿನ್ನ ಲಲಿತಾಂಗ ಮಗನಾಗಿ ಹುಟ್ಟಿದ್ದಾನೆ. ಸ್ವಯಂ ಪ್ರಭೆಯಾಗಿದ್ದ ನೀನು ಈಗ ಶ್ರೀಮತಿ ಹೆಸರಿನಲ್ಲಿ ನನ್ನ ಮಗಳಾಗಿರುವೆ ಎಂದು ಎಲ್ಲವನ್ನೂ ಸಾದ್ಯಂತವಾಗಿ ವಿವರಿಸಿದ.

ಅದೇ ಸಮಯದಲ್ಲಿ ಪಂಡಿತೆ ತನ್ನ ಜಾಣಾಕ್ಷತನದಿಂದ ಆ

ಚಿತ್ರಪಟವನ್ನು ನೋಡುವವರೆಲ್ಲ ಪ್ರತಿಕ್ರಿಯಿಸುತ್ತಿದ್ದ ರೀತಿಯಿಂದ ಪೂರ್ವದ ಲಲಿತಾಂಗನನ್ನು ಪತ್ತೆ ಹಚ್ಚಿದಳು. ಚಿತ್ರಪಟವನ್ನು ನೋಡುತ್ತಿದ್ದ ಸಾಮಾನ್ಯರೂ ರಾಜಕುಮಾರರು ಎಲ್ಲಾ ಇದ್ದು, ಅವರಲ್ಲಿದ್ದ ಒಬ್ಬ ರಾಜಕುಮಾರ ಮಾತ್ರ, ಆ ಪಟವನ್ನು ನೋಡುತ್ತಿದ್ದಂತೆ, ಏನನ್ನೋ ನೆನಪಿಸಿಕೊಂಡು ವಿರಹಾಕುಲನಾಗಿ ವಿಲಪಿಸುವಂತೆ ಕಾಣಿಸುತ್ತಾನೆ. ಈಶಾನಕಲ್ಪ ಪುರವಿಮಾನ. ದೇವಸಮೂಹ, ಲಲನೆಯರು, ತಾನು, ತನ್ನವಳಾದ ಸ್ವಯಂಪ್ರಭೆ, ನಂದನವನ, ಉಯ್ಯಾಲೆ, ಮಣಿಭವನ, ಇತ್ಯಾದಿ ಎಲ್ಲ ವಿವರಗಳಿದ್ದು, ಅವುಗಳನ್ನೆಲ್ಲ ಗುರುತಿಸುತ್ತಾನೆ. ಜೊತೆಗೆ ತಮ್ಮಿಬ್ಬರ ನಡುವೆ ನಡೆದ ಸರಸ, ವಿರಸದ ಸನ್ನಿವೇಶಗಳು, ಹೊಡೆದಾಡಿದ ಜಾಗಗಳು, ಮುನಿದು ಸರಿದ ವನ, ಪ್ರಣಯ ಕಲಹಗಳು ಎಲ್ಲವೂ ಅವನನ್ನು ವಿರಹಾಗ್ನಿದಗ್ಧನನ್ನಾಗಿ ಮಾಡುತ್ತವೆ. ಅಲ್ಲದೆ ಬಿಟ್ಟು ಹೋದುದೇಕೆ ಎಂದು ಚಿಂತಿಸುತ್ತಾನೆ. 'ಹಾ ಸ್ವಯಂಪ್ರಭೆ, ಪ್ರಿಯೆ, ದಯಿತೆ !' ಎಂದು ವಿಲಪಿಸುತ್ತಾ ಮೂರ್ಛೆ ಹೋಗುತ್ತಾನೆ. ಉಪಚಾರದ ನಂತರ ತಿಳಿದೆದ್ದ ವಜ್ರಜಂಘ ಈ ಚಿತ್ರಪಟವನ್ನು ತಂದವರಾರೆಂದು ವಿಚಾರಿಸುವಲ್ಲಿ ಪಂಡಿತೆ ಅವನ ಬಳಿ ಸಮೀಪಿಸಿ, ಶ್ರೀಮತಿಯ (ಪೂರ್ವದ ಸ್ವಯಂಪ್ರಭೆ) ವೃತ್ತಾಂತವನ್ನು ತಿಳಿಸುತ್ತಾಳೆ. ಶ್ರೀಮತಿಯ ಅನುಪಮ ಸೌಂದರ್ಯವನ್ನು "ಬಳ್ಳಿಯೂ ಕನ್ನೈದಿಲೆಯೂ, ನವಿಲುಗರಿಯೂ ಕಾಮನಬಿಲ್ಲು, ಹವಳದ ಕಾಂತಿಯೂ, ಮುತ್ತಿನ ಹಾರದ ಹೊಳಪು ಇದೆಲ್ಲ ಎಲ್ಲಿಂದಲೋ ಬಂದು ಒಂದೆಡೆ ಸೇರಿವೆ ಎಂಬ ಭ್ರಾಂತಿಯನ್ನುಂಟು ಮಾಡುವಂತೆ ಅವಳ ರೂಪಿದೆ ಎಂದು ಬಣ್ಣಿಸುತ್ತಾಳೆ. ಜೊತೆಗೆ ತನ್ನ ಪರಿಚಯವನ್ನೂ ತಿಳಿಸಿ.' ಈ ಚಿತ್ರ ಪಟವನ್ನು ಕೊಟ್ಟು ತನ್ನಿಯನನ್ನು ಎಲ್ಲೇ ಇದ್ದರೂ ಹುಡುಕಿ ತರಬೇಕೆಂದು ಆದೇಶಿಸಿದ್ದಾಳೆ' ಎಂದು ತಿಳಿಸಲು ವಜ್ರಜಂಘನಿಗೆ ಸ್ವರ್ಗವೇ ಅಂಗೈಯಲ್ಲಿಳಿದು ಬಂದಂತಾಯಿತು. ಅವನ ಮೈಮನಗಳು ಪುಲಕಿತಗೊಂಡವು. ಅವಳನ್ನು ಕಾಣುವಾತುರವನ್ನು ವ್ಯಕ್ತಪಡಿಸಿದನು. ಅವಳನ್ನು ಕಾಣುವವರೆಗಿನ ತನ್ನ ಉದ್ವೇಗವನ್ನು ತಡೆಹಿಡಿದುಕೊಳ್ಳಲು ಅವಳ ಚಿತ್ರಪಟವಾದರೂ ತನ್ನಲ್ಲಿ ಇರಲೆಂದು ಪಂಡಿತೆಯಿಂದ ಕೇಳಿ ಪಡೆಯುತ್ತಾನೆ. ಹಾಗೆಯೇ ಅವಳ ಅಲಂಬನಕ್ಕೆ ತನ್ನ ಚಿತ್ರಪಟವನ್ನು ಕೊಡುತ್ತಾನೆ. ಚಿತ್ರಪಟದೊಂದಿಗೆ ಹಿಂದಿರುಗಿದ ಪಂಡಿತೆ, ಅಲ್ಲಿ

ನಡೆದುದೆಲ್ಲವನ್ನೂ ವಿವರಿಸಿ, ಅವಳ ಕೈಗೆ ಚಿತ್ರಪಟವನ್ನು ನೀಡಲು ಅದನ್ನು ಬಿಚ್ಚಿ ನೋಡಿದ ಶ್ರೀಮತಿಗೆ, ಅವನ ರೂಪಿನ ಜೊತೆಗೆ ಅವನೊಡನೆ ಕಳೆದ ಸುಖದ ಕ್ಷಣಗಳೆಲ್ಲ ನೆನಪಾಗುತ್ತವೆ. ಜನ್ಮಾಂತರದಲ್ಲಿ ಕಳೆದುಕೊಂಡ ನಲ್ಲನು ತನಗೆ ಸುಲಭ ಸಾಧ್ಯನಾಗಲಿದ್ದಾನೆ ಎಂಬ ಆಲೋಚನೆಯಿಂದಲೇ ವಸಂತಕಾಲದಲ್ಲಿ ಅರಳಿದ ಮಾವಿನ ಮರದಂತೆ ಕಂಡಳು.

ಅಷ್ಟು ಹೊತ್ತಿಗೆ ಶ್ರೀಮತಿ ವಜ್ರಜಂಘರ ಜನ್ಮಾಂತರ ಸ್ನೇಹ ಸಂಬಂಧದ ನೆನಪಿಗೆ ಕಾರಣವಾದ ಚಿತ್ರಪಟ ವೃತಾಂತ ವಜ್ರಜಂಘನ ಸೇವಕರ ಮೂಲಕ ವಜ್ರಬಾಹುವಿಗೆ ತಿಳಿಯಲು ಆನಂದತುಂದಿಲನಾಗಿ ಅವರಿಬ್ಬರ ಅನನ್ಯ ಪ್ರೀತಿ ಸಂಬಂಧವನ್ನು ಗಟ್ಟಿಗೊಳಿಸಲು ವಿವಾಹದ ಆಲೋಚನೆ ಮಾಡಿ ವಜ್ರದಂತನ ಅರಮನೆಗೆ ಬರುತ್ತಾನೆ. ವಜ್ರದಂತನೂ ಈ ಸಂಬಂಧಕ್ಕೆ ಅತ್ಯುತ್ಸಾಹ, ಆನಂದಗಳಿಂದ ಮುಂದಾಗುತ್ತಾನೆ. ವಜ್ರಬಾಹುವನ್ನು ಸಕಲ ಮರ್ಯಾದೆಗಳಿಂದ ಸ್ವಾಗತಿಸಿ, ಸತ್ಕರಿಸಿದ್ದೇ ಅಲ್ಲದೆ ತನ್ನ ಮಗಳಾದ ಶ್ರೀಮತಿಯನ್ನು ವಜ್ರಬಾಹುವಿನ ಮಗನಾದ ವಜ್ರಜಂಘನಿಗೆ ಪರಿಣಯ ಮಾಡಿಕೊಡಲು ಪೂರ್ಣ ಸಮ್ಮತಿ ಸೂಚಿಸುತ್ತಾನೆ." ಈ ಕನ್ಯೆಗೆ ಇವನೇ ಒಡೆಯ. ಅದೊಂದೆ ಅಲ್ಲ. ಕುಲ ಛಲಗಳ ಹಿರಿಮೆ ಇಬ್ಬರಿಗೂ ಒಂದೇ. ಚೆಲ್ವು, ಒಳ್ನುಡಿ, ವಿದ್ಯೆ ಜನ್ಮಾಂತರ ಸ್ನೇಹ ಇವೆಲ್ಲವೂ ಇಬ್ಬರಿಗೂ ಒಂದೇ. ಈ ವಿಷಯದಲ್ಲಿ ಹೀಗೆ ಹಾಗೆ ಎಂದು ಹೇಳಲೂ, ದೋಷವನ್ನು ಹುಡುಕಲೂ, ಹೀಗಲ್ಲವೆನ್ನಲೂ ಮತ್ತಾರಿಗೂ ಎಡೆಯಿಲ್ಲ. ಮೊದಲೇ ಬ್ರಹ್ಮನು ಈ ಕನ್ಯೆಯನ್ನು ಕೊಟ್ಟಿದ್ದಾನೆ. ನನಗೂ ನಿನಗೂ ಗೊಡವೆಯೇಕೆ ? ಅದೂ ಅಲ್ಲದೆ ಎಳೆಯ ಮಾವಿನ ಗಿಡವು ನವ ಮಾಲಿಕೆಗೂ, ಲಲಿತವಾದ ಅಡಕೆ ಮರವು ವೀಳೆಯದ ಹಂಬಿಗೂ ಯೋಗ್ಯವಾದಂತೆ ನಿನ್ನ ಮಗನು ನನ್ನ ಮಗಳಿಗೆ ತಕ್ಕವನು. ಈ ಭೂಮಿಯಲ್ಲಿ ಇವಳೇ ಸ್ತ್ರೀರತ್ನ. ಇವನು ಪುರುಷರತ್ನ. ಇವರಿಬ್ಬರನ್ನೂ ಕೂಡಿಸಿ ಬ್ರಹ್ಮನು ಸಮಾನವಾದ ಜೋಡಿಯನ್ನು ಸೇರಿಸಿದನೆಂಬ ಯಶಸ್ಸಿಗೆ ಪಾತ್ರನಾಗಲಿ" ಎಂದು ಮನದ ವಿಚಾರಗಳನ್ನೆಲ್ಲ ವಜ್ರಬಾಹುವಿಗೆ ಬಿಚ್ಚಿಟ್ಟು ಕಳಿಸಿದ.

ವಜ್ರದಂತ, ವಜ್ರಬಾಹುಗಳು ಪುರೋಹಿತರನ್ನು ಕರೆಸಿ ಒಂದು

ಶುಭದಿನ, ಶುಭ ಮುಹೂರ್ತವನ್ನು ನಿಶ್ಚಯಿಸಿ ಅದ್ದೂರಿಯ ಮದುವೆ ನಡೆಸುತ್ತಾರೆ. ಶಾಸ್ತ್ರೋಕ್ತ ರೀತಿಯಲ್ಲಿ ವಿವಾಹ ವಿಧಿಗಳನ್ನು ಪೂರೈಸಿದರು. ವಧೂವರರಿಬ್ಬರೂ ರತಿ ಮನ್ಮಥರಂತೆ, ಸಕಲಾಭರಣ ಭೂಷಿತರಾಗಿ ಕಂಗೊಳಿಸಿದರು. ಧಾರೆ ಎರೆದಾಗ, ವಜ್ರಜಂಘನು ಶ್ರೀಮತಿಯ ಕೋಮಲವಾದ ಕರತಲದ ಸ್ಪರ್ಶ ಸುಖದಿಂದ ಪುಲಕಿತನಾದನು. ನಲ್ಲನ ಕರತಳ ಸ್ಪರ್ಶದಿಂದ ಶ್ರೀಮತಿ ಲಜ್ಜಾಧಿಕ್ಯದಿಂದ ಬೆವರಿ ತಲೆ ತಗ್ಗಿಸಿದಳು. ನೂತನ ಸಮಾಗಮದಿಂದಾದ ಭಯದಿಂದ ಮನೋಹರವಾದ ಮುಗ್ಧವಧುವಿನ ಮುಖ ದರ್ಶನ ಸುಖದಿಂದ ವಜ್ರಜಂಘನು" ನನ್ನ ನಿನ್ನ ಹಿರಿದಾದ ಈ ಸಮಾಗಮವು ನಮ್ಮಿಬ್ಬರ ಪೂರ್ವಜನ್ಮದ ಪ್ರೇಮದ ಫಲವಾಗಿಯೇ ಸಂಘಟಿತವಾದುದು. ಈ ಭವದಲ್ಲಾದ ಸಂಸ್ಕಾರವು ಮುಂದಿನ ಭವದಲ್ಲಿಯೂ ಮೈಗೂಡುವುದು. ಆದ್ದರಿಂದ ನನ್ನ ನಿನ್ನ ಹಿಂದಿನ, ಇಂದಿನ, ಮುಂದಿನ ಜನ್ಮಗಳು ಸಫಲವಾದವು ಏಣಾಕ್ಷಿ" ಎಂದು ಪ್ರೀತಿಯಿಂದ ನುಡಿದು ಸಾರ್ಥಕ್ಯ ಭಾವವನ್ನು ವ್ಯಕ್ತಪಡಿಸಿದ.

ವಜ್ರದಂತನು ಸಕಲ ರಾಜ ಮರ್ಯಾದೆಗಳೊಡನೆ, ರಾಜ ಪರಿವಾರ, ಪರಿಚಾರಿಕೆಯರೂ ಜೊತೆಗೆ ಪಂಡಿತೆಯನ್ನು ಮಗಳು ಮತ್ತು ಅಳಿಯನನ್ನು ಕಳಿಸಿಕೊಡುವಾಗ, ಕಣ್ವರು ಶಕುಂತಲೆಯನ್ನು ಬೀಳ್ಕೊಡುವಾಗ ಅತ್ತೆಯ ಮನೆಯಲ್ಲಿ ಹೇಗಿರಬೇಕೆಂದು ನುಡಿದ ಹಿತ ನುಡಿಗಳ ಪ್ರತಿಬಿಂಬದಂತೆ, ವಜ್ರದಂತನೂ ಮಗಳನ್ನು ಅಪ್ಪಿ, ಆಶೀರ್ವದಿಸಿ, ತಲೆ ನೇವರಿಸಿ, ಪ್ರೀತಿಯಿಂದ "ಮಗಳೆ, ನಿನ್ನ ಪತಿಯ ಮನಸ್ಸಿನ ಇಂಗಿತವನ್ನು ಅರಿತುಕೊಂಡು, ಅಂಜಿಕೊಂಡು ಬೆಚ್ಚಿಕೊಂಡು ಹೇಳಿದಂತೆ ನಡೆದುಕೋ. ಆತನು ಏನೆಂದರೂ ಕೋಪಗೊಳ್ಳದಿರು. ಅಗ್ರಮಹಿಷಿಯ ಸ್ಥಾನದಲ್ಲಿ ಕಾಲೂರಿ ನಿಲ್ಲು. ಅಮಿತ ಪುಣ್ಯರಾದ ಮಕ್ಕಳನ್ನು ಪಡೆ" ಎಂದು ಹಿತವಚನಗಳನ್ನು ಹೇಳಿದ. ಅಂತಃಪುರ ಸ್ತ್ರೀಯರು, ಪರಿವಾರದವರೂ ಸಾಮಂತರೂ ಮೊದಲಾದವರನ್ನು ಕೂಡಿಕೊಂಡು ವಜ್ರದಂತ ಮಗಳು ಅಳಿಯನನ್ನು ಬಂದಷ್ಟು ದೂರ ಕಳಿಸಿಕೊಟ್ಟು ಬಂದನು.

ಉತ್ಪಲ ಖೇಟದಲ್ಲಿ ರಾಜ ದಂಪತಿಗಳಿಗೆ ವೈಭವದ ಸ್ವಾಗತವನ್ನು

ಕೋರಿದರು. ಅವರನ್ನು ದರ್ಶಿಸಲು ಪುರ ಸ್ತ್ರೀ ಜನರೆಲ್ಲ ತಮ್ಮ ಕೆಲಸ ಕಾರ್ಯಗಳನ್ನು ಬಿಟ್ಟು ಬಂದು ಕಣ್ಣರೆಪ್ಪೆ ಮಿಟುಕಿಸದೆ ಅವರೀರ್ವರ ಅನುಪಮ ಸೌಂದರ್ಯವನ್ನು ವೀಕ್ಷಿಸಿದರು. ಹಿಂದಿನ ಜನ್ಮದಲ್ಲಿ ದಿವಿಜೇಂದ್ರಾವಾಸದಲ್ಲಿ ಬಹು ವಿಧವಾಗಿ ಸ್ವರ್ಗ ಭೋಗಗಳನ್ನು ಅನುಭವಿಸಿದವರು, ಈ ಜನ್ಮದಲ್ಲಿಯೂ ಅದು ಲಭ್ಯವಾಗಬೇಕಾದರೆ ಎಂತಹ ಪುಣ್ಯ, ಮಾಡಿರಬೇಕು; ಇವರಿಬ್ಬರೂ ನಿಜವಾಗಿಯೂ ಎಷ್ಟೋ ತಪಸ್ಸು ಮಾಡಿ ಇಂತಹ ಪುಣ್ಯ ಭಾಜನರಾಗಿರಬೇಕು' ಎಂದು ಬಾಯ್ತುಂಬಾ ಕೊಂಡಾಡಿದರು.

ಈ ರಾಜದಂಪತಿಗಳು ಅನುಭವಿಸಿದ ಸುಖವಿಲ್ಲ. ಗಾನ, ನರ್ತನ, ಸುರತ ಸುಖಗಳಿಂದ ಸಂತೃಪ್ತ ಬದುಕು ಅವರದಾಗಿತ್ತು. ಕ್ಷಣಾರ್ಧದ ಅಗಲಿಕೆಯೂ ಅವರಿಗೆ ಸಾಧ್ಯವಿಲ್ಲದಾಗಿತ್ತು. ಇವರ ಅನ್ಯೋನ್ಯ-ಪ್ರೀತಿ, ದಾಂಪತ್ಯಗಳ ಫಲವಾಗಿ ನಲ್ವತ್ತೊಂಬತ್ತು ಅವಳಿ ಮಕ್ಕಳು ಹುಟ್ಟಿದರು.

ಇಂತಹ ಸುಖದ ಅತಿರೇಕದಲ್ಲಿ ಬಾಳುವಾಗಲೇ ವಜ್ರದಂತ, ವಜ್ರಬಾಹುಗಳಿಬ್ಬರೂ ಸಂಸಾರ ವಿರಸನಗೊಂಡು, ಜೀವನ ನಶ್ವರತೆಯ ಅರಿವಿನಿಂದಾಗಿ, ಸಿರಿ, ಸಂಪತ್ತು, ರೂಪ, ವಿಭವಾದಿಗಳು ಯಾವುದೂ ಸ್ಥಿರವಲ್ಲ ಎಂಬ ಅನುಭವದೊಂದಿಗೆ, ಮೋಕ್ಷಾಕಾಂಕ್ಷಿಗಳಾಗಿ ತಪಸ್ಸಿಗೆ ತೆರಳಿದರು. ವಜ್ರಜಂಘನಿಗೆ ರಾಜ್ಯಭಾರದ ಹೊಣೆಯೂ ಹೆಗಲೇರಿತು. ಅತ್ತ ಮಾವನ ಮನೆಯಲ್ಲಿ, ರಾಜ್ಯರಕ್ಷಣೆಯ ಸಮಸ್ಯೆ ಎದುರಾಗಲು ಅವರ ರಕ್ಷಣೆಗೆಂದು ಹೊರಟು, ಶತ್ರುಗಳನ್ನು ಗೆದ್ದು, ನೊಂದ ಬಂಧುಗಳನ್ನು ಸಂತೈಸಿ, ತಂಗಿಯ ಮಗನಾದ ಪುಂಡರೀಕನಿಗೆ ರಾಜ್ಯಭಾರ ವಹಿಸಿ, ಮಂತ್ರಿ ಸಾಮಂತರಿಗೆ ರಾಜ್ಯ ಕ್ಷೇಮದ ಹೊಣೆ ಹೊರೆಸಿ ಉತ್ಪಲಖೇಟಕ್ಕೆ ಮರಳಿ, ಶ್ರೀಮತಿಯೊಡನೆ ಮೊದಲಿನಂತೆ ಸುಖ ಭೋಗಗಳನ್ನು ಅನುಭವಿಸತೊಡಗಿದ. ಅಮರಲೋಕದ ಸುಖಕ್ಕೂ ಕಿಚ್ಚಿಡುವ ತೆರದ ಸುಖಾತಿರೇಕದಲ್ಲಿ, ಕ್ಷಣದಗಲಿಕೆಗೂ ಎಡೆಯಾಗದಂತೆ ಶ್ರೀಮತಿ, ವಜ್ರಜಂಘರು ಇಹವನ್ನೇ ಮರೆತಂತೆ ಬಾಳುತ್ತಿರಲು ಪ್ರೀತಿಯ ದುರಂತದ ಕ್ಷಣಗಳು ಅನಿರೀಕ್ಷಿತವಾಗಿ ಎದುರಾದವು.

ಒಂದು ದಿನ ರಾತ್ರಿ ಮರಕತ ಮಣಿ ಶಿಲೆಗಳಿಂದ ರಚಿತವಾದ ಭೂಭಾಗದ ಮೇಲಿದ್ದ ವಿಲಾಸಭವನದ ಗೋಡೆಗಳ ಮೇಲೆಲ್ಲ ಅಮರ ಕಿನ್ನರ, ಖಚರ ದಂಪತಿಗಳ ಸುಂದರ ಪಟಗಳು ಶೋಭಿಸುತ್ತಿದ್ದವು. ಕಾಲಾಗರು ಧೂಪದ ಪರಿಮಳವು ಪಸರಿಸಿತ್ತು. ಮಣಿದೀಪಗಳ ಕಾಂತಿಯಿಂದ ಕತ್ತಲು ಕಣ್ಮರೆಯಾಗಿತ್ತು. ರತ್ನ ಖಚಿತ ಕಾಂಚನ ಮಂಚದ ಶಯ್ಯಾತಲಗಳ ಮೇಲೆ ಸಮುದ್ರದ ನೊರೆಯಂತೆ ಬೆಳ್ಳಗಿರುವ ರೇಷ್ಮೆ ದುಪ್ಪಟಿಗಳನ್ನು ಹಾಸಲಾಗಿತ್ತು. ಉಭಯ ಪಾರ್ಶ್ವಗಳಲ್ಲಿಯೂ ಸುಂದರವಾದ ದಿಂಬುಗಳು ರಾರಾಜಿಸಿದವು. ಅನೇಕ ವಿಲಾಸಿನಿಯರ ವಿಲಾಸಗಳಿಗೆ ಆಶ್ರಯವಾದ ಆ ಸುಂದರ ಭವನದಲ್ಲಿ ಪರಸ್ಪರವಾಗಿ ದೇಹಗಳ ಸಂಸ್ಪರ್ಶ ಸುಖದಿಂದ ಉನ್ಮೀಲಿತ ನೇತ್ರರಂತೆ ಆ ರಾಜದಂಪತಿಗಳು ನಿದ್ರಾಪರವಶರಾಗಿದ್ದರು. ಆಗ ಮುಚ್ಚಿದ್ದ ಹರಿ ನೀಲರತ್ನ ಗವಾಕ್ಷಗಳ ಬಾಗಿಲನ್ನು ತೆಗೆಯಲು ಮರೆತಿದ್ದರು. ಸೂರ್ಯಕಾಂತದ ಧೂಪದ ಪಾತ್ರೆಯಲ್ಲಿ ಸೆಜ್ಜೆವಳನು ಕೇಶ ಸಂಸ್ಕಾರಕ್ಕೆಂದು ಅಳವರಿಯದೆ ಕಾಲಾಗರು ಧೂಪವನ್ನು ಇಕ್ಕಿದ್ದನು. ಆ ಧೂಪ ಸಮೂಹವು ಮೊದಲು ಉದ್ದವಾಗಿ ಎದ್ದು ಆ ಭವನವನ್ನೆಲ್ಲ ವ್ಯಾಪಿಸಿ ತುಂಬಿಕೊಂಡಿತು. ದಟ್ಟವಾಗಿ ಕವಿದ ಹೊಗೆ ಈ ರಾಜ ದಂಪತಿಗಳ ಉಸಿರನ್ನು ಬಂಧಿಸಿತು. ಕಾಲಾಗರು ಧೂಪ ಅವರ ಪಾಲಿಗೆ ಕಾಳಸರ್ಪವಾಯಿತು. ಸುತ್ತಿಕೊಂಡ ಹೊಗೆಯ ನಡುವೆ ಈ ಪ್ರೇಮಿಗಳಿಬ್ಬರೂ ಒಬ್ಬರನ್ನೊಬ್ಬರು ಅಪ್ಪಿಕೊಂಡು, ತೋಳುಗಳನ್ನು ಸಡಿಲಿಸದೆಯೇ ಜೊತೆಯಾಗಿಯೇ ಕೊನೆಯುಸಿರೆಳೆದರು. ಭೋಗಕ್ಕೆ ಪೂರಕವಾಗಿದ್ದ, ಕಾಲಾಗರು ಧೂಪ ದೈತ್ಯಾಕಾರದಲ್ಲಿ ವ್ಯಾಪಿಸಿ ಭೋಗಿಗಳಿಬ್ಬರನ್ನೂ ಕೊಂದಿತು. ಅನೂಹ್ಯ ಸುಖಭೋಗಕ್ಕೆ ಆಗರವಾದ ಆ ದಂಪತಿಗಳು ನೋಡ ನೋಡುತ್ತಿದ್ದಂತೆ ಸಾವಿನ ದುರಂತದ ಮಡಿಲು ಸೇರಿದರು. ಅವರು ಅನುಭವಿಸಿದ ಪ್ರೀತಿಗೆ ಎಲ್ಲೆ ಎಲ್ಲಿದೆ ? ಎಂದು ಪ್ರಶ್ನಿಸಿಕೊಳ್ಳುತ್ತಿದ್ದಂತೆ, ಪ್ರೀತಿಯೇ ದುರಂತದ ಕಮರಿಯಾಯಿತು.

★ ★ ★

ಸೆಲೆ - ೩

# ನೆರೆದೆಲ್ಲರು ಮೆನಗೆ ಪುರುಷಭಿಕ್ಷಮನಿಕ್ಕಿ

ನಿಜವಾದ ಪ್ರೀತಿ ಮೊಳೆಯಲು ಸಮಯ ಸಂದರ್ಭಗಳು ಬೇಕು. ಒಮ್ಮೆ ಪ್ರೀತಿ ಮೊಳೆತರೆ, ಅದು ನಿಜವಾಗಿದ್ದಲ್ಲಿ ಕ್ರಮೇಣ ಬೇರುಗಳನ್ನು ಎದೆಯ ಮಣ್ಣಿನಲ್ಲಿ ಇಳಿಸುತ್ತಾ ಇಡೀ ದೇಹವನ್ನು ಆಕ್ರಮಿಸಿಕೊಂಡು ಬಿಡುತ್ತದೆ. ಪ್ರೀತಿಯ ಮುಂದೆ ಜಾತಿ, ಗೀತಿ, ಅಂತಸ್ತು, ಅಧಿಕಾರ ಯಾವುದೂ ನೆನಪಿನಲ್ಲಿ ಉಳಿಯದೆ ಪ್ರೀತಿಯೊಂದೇ ಉಸಿರಾಗಿ, ತಪವಾಗಿ, ಬದುಕಾಗಿ ಮತ್ತೆಲ್ಲವೂ ಪ್ರೀತಿಸುವವರ ಪಾಲಿಗೆ ಶೂನ್ಯವಾಗುತ್ತದೆ. ಜಿತೇಂದ್ರೀಯನಾದರೇನು ಲೌಕಿಕನಾದರೇನು ? ಪ್ರೀತಿ ಮಾಡುವ ಸಮಯ ನಮ್ಮ ಪ್ರಜ್ಞೆಗೆ ಮೀರಿದ್ದು !

ಸಂಸ್ಕೃತದಲ್ಲಿ ಬಾಣಭಟ್ಟನಿಂದ ರಚಿತವಾದ ಕಾದಂಬರಿ ಎಂಬ ಗದ್ಯ ಗ್ರಂಥದಲ್ಲಿ ನಾಗವರ್ಮ 'ಕರ್ಣಾಟಕ ಕಾದಂಬರಿ' ಹೆಸರಿನಲ್ಲಿ ಚಂಪೂಕಾವ್ಯವಾಗಿ ರಚಿಸಿದ್ದಾನೆ. ಇದೊಂದು ಉದಾತ್ತ ಶೃಂಗಾರ ಕಾವ್ಯ; ಉನ್ನತ ಪ್ರೇಮಕಾವ್ಯ. ಜನ್ಮಾಂತರಗಳ ಜಟಿಲವಾದ ಕಥಾನಕವಿದೆ. ಈ ಕಾವ್ಯದಲ್ಲಿ ಮುಖ್ಯ ಪಾತ್ರವಾಗಿ ಮಹಾಶ್ವೇತೆ ಕಾಣಿಸಿಕೊಳ್ಳುತ್ತಾಳೆ. ತಾನು ಅನುರಕ್ತಳಾದ ಮುನಿಕುಮಾರ ಪುಂಡರೀಕನೊಂದಿಗೆ ಅವಳ ಪ್ರೀತಿಯ ಸ್ವರೂಪ, ಪ್ರೀತಿಗಾಗಿ ಮಾಡುವ ತ್ಯಾಗ, ತಪಸ್ಸು, ಪ್ರೀತಿಸಿಯೂ ಅವನೊಡನೆ ಒಡನಾಟ ಸಾಧ್ಯವಾಗದೆ ಅನುಭವಿಸಿದ ವಿರಹ ಯಾತನೆ, ಮತ್ತು ಪುಂಡರೀಕನೂ ಮಹಾಶ್ವೇತೆಗಾಗಿ ಪಟ್ಟಪಾಡು, ನೊಂದ, ನೋವು, ಇನ್ನೇನು ಅವರಿಬ್ಬರೂ ಸೇರುವ ಸಮಯ ಬಂತೆಂದಾಗ ವಿಧಿ ವಶದಿಂದಾಗಿ ಪುಂಡಲೀಕ ಪ್ರಾಣ ನೀಗುವುದೇ ಅಲ್ಲದೆ ಅವನ ಕಳೇಬರವೂ ಮಹಾಶ್ವೇತೆಗೆ ದಕ್ಕದಂತೆ ಮಹಾಪುರುಷ, ದಿವ್ಯ ಪುರುಷನೊಬ್ಬನು ಆಕಾಶಕ್ಕೆ ತೆಗೆದುಕೊಂಡು ಹೋಗುವ ಸನ್ನಿವೇಶಗಳೊಂದಿಗೆ ಈ ಪ್ರೇಮಕಾವ್ಯ, ಶೃಂಗಾರ ಕಾವ್ಯ, ಅಸ್ವಾದ್ಯಶವಾಗಿದೆ. ಗಂಧರ್ವ ಶ್ರೇಷ್ಠನಾದ ಚಿತ್ರರಥನ ಗೆಳೆಯ ಹಂಸ

ಮತ್ತು ಚಂದ್ರಕಿರಣ ಸಂಜಾತೆಯಾದ ಗೌರಿಯರ ಮಗಳಾಗಿ ಹುಟ್ಟಿದ ಮಹಾಶ್ವೇತೆ, ಅಪರೂಪಕ್ಕೆ ಹುಟ್ಟಿದ ಮಗಳಾದ್ದರಿಂದ ಅವಳಿಗೆ ಒಂದಿನಿತೂ ಶ್ರಮವಾಗದಂತೆ, ದುಃಖದ ಸೋಂಕಿಲ್ಲದಂತೆ, ಅವಳ ಬಯಕೆಗಳೆಲ್ಲವನ್ನೂ ತೀರಿಸುತ್ತಾ ಮುದ್ದಿನಿಂದ ಬೆಳೆಸಿದರು. ಕಾಲ ಕಳೆದಂತೆ ಅವಳಲ್ಲಿ ವಸಂತಾಗಮನದಂತೆ ಯೌವ್ವನವು ಉದಯಿಸಲು ಸೌಂದರ್ಯಕ್ಕೆ ಮೆರಗು ಕೊಟ್ಟಂತಾಯಿತು. ಹೀಗೆ ಅವಳು ತುಂಬು ಯೌವ್ವನದಲ್ಲಿ ಉಕ್ಕುವ ಚೆಲುವಿನಲ್ಲಿರಲು, ಶಿಶಿರ ಋತುವಿಗೆ ಮೃತ್ಯುಪ್ರಾಯನಾಗಿ ಬಂದ ವಸಂತಋತು ಪ್ರಕೃತಿಯ ಚೆಲುವನ್ನು ಮತ್ತಷ್ಟು ಹೆಚ್ಚಿಸಿತು. ಕುಮುದ, ಕುವಲಯಗಳಿಂದ ತುಂಬಿದ ಸರೋವರಗಳು, ಮತ್ತೇರಿ ಸುಳಿದಾಡುವ ದುಂಬಿಗಳು, ಕೋಗಿಲೆಗಳಿಗೆ ಆಶ್ರಯವಿತ್ತ ಸಿಹಿಮಾವಿನ ಮರಗಳು, ಹೂಗಳಿಂದ ದಿವ್ಯ ಪರಿಮಳ ಹೊತ್ತು ಬೀಸುವ ಮಂದಗಾಳಿ, ಇಂತಹ ಹೊತ್ತಿನಲ್ಲಿ ತನ್ನ ತಾಯಿಯೊಡನೆ ಅಚ್ಛೋದ ಸರಸಿಯ ಬಳಿ ಬಂದಳು.ತನ್ನನ್ನು ಆವರಿಸಿರುವ ಗಂಧಗಾಳಿಯಲ್ಲಿನ ಕಂಪನ್ನು ಆಸ್ವಾದಿಸುವಾಗ ಹಿಂದೆಂದೂ ಆಘ್ರಾಣಿಸದ ಪುಷ್ಪ ಪರಿಮಳಕ್ಕೆ ಮನಸೋತು, ಆ ಪರಿಮಳದ ಬೆನ್ನಹಿಂದೆ ಹೋದಾಗ, ವಸಂತನಂತೆ ಸುಂದರನಾದ ಮುನಿಕುಮಾರನು ಕೈಯಲ್ಲಿ ಕಮಂಡಲು, ಜಪಸರಗಳನ್ನು ಹಿಡಿದು, ಕಿವಿಯಲ್ಲಿ ಪುಷ್ಪ ಮಂಜರಿಗಳನ್ನು ಧರಿಸಿ ಗೆಳೆಯನೊಂದಿಗೆ ಬರುತ್ತಿದ್ದುದನ್ನು ನೋಡುತ್ತಾಳೆ. ಅವನು ಅವಳಿಗೆ ಬ್ರಹ್ಮಚರ್ಯವ್ರತಕ್ಕೆ ಅಲಂಕಾರ ರೂಪನಾಗಿಯೂ, ಧರ್ಮಕ್ಕೆ ಹೊಸಹರೆಯವಂತೆಯೂ, ಸರಸ್ವತಿಗೆ ವಿನೋದದ ಬೆಡಗಿನಂತೆಯೂ, ವಿದ್ಯೆಗಳೆಂಬ ಲಲನೆಯರಿಗೆ ಸ್ವಯಂವರದ ಪತಿಯಂತೆಯೂ, ಸಮಸ್ತ ವೇದಗಳಿಗೂ ಸಂಕೇತನಿಕೇತನದಂತೆಯೂ ಕಾಣಿಸುತ್ತಾನೆ. ಅವನನ್ನು ನೋಡ ನೋಡುತ್ತಿದ್ದಂತೆ ಅವಳ ದೃಷ್ಟಿ ಮುನಿಕುಮಾರನು ಕಿವಿಯ ಮೇಲೆ ಧರಿಸಿದ್ದ ಹೂಗೊಂಚಲಿನ ಮೇಲೆ ಬೀಳುತ್ತದೆ.ಅವನನ್ನು ನೋಡಿದ ಕ್ಷಣದಿಂದಲೇ ಮನ್ಮಥನ ಶರಾಘಾತಕ್ಕೆ ಒಳಗಾಗುತ್ತಾಳೆ. ಇದರಿಂದ ಅವಳ ಸ್ಥಿತಿ ಹೊಸ ಹೂವಿನ ರಸವನ್ನು ಕುಡಿದು ಸೊಕ್ಕಿದ ಹೆಣ್ಣು ದುಂಬಿಯಂತೆ ಪರವಶಳಾಗುತ್ತಾಳೆ. ಮಾತಿಲ್ಲ; ಚಲನೆಯಿಲ್ಲ, ಚಿತ್ರಸ್ಥಳಂತೆ ಇದ್ದು, ಒಳಗಿನಿಂದ ಉರಿದೆದ್ದ ಕಾಮಜ್ವಾಲೆಯಿಂದ ಹೊರಟ ಹೊಗೆಯಂತೆ ನಿಟ್ಟುಸಿರು ಬಿಡುತ್ತಾಳೆ.

ಅವಳಲ್ಲಿ ಉಂಟಾಗುತ್ತಿದ್ದ ಕಾಮ ವಿಕಾರಗಳಿಂದ ನಾಚಿಕೆ, ಭಯಗಳಿಂದ ತಲ್ಲಣಿಸಿ ಹೋಗುತ್ತಾಳೆ.ತನ್ನ ಸ್ಥಿತಿಯರಿತರೆ ಮುನಿಕುಮಾರನು 'ಈ ಹೆಂಗಸರಿಗೆ ಪ್ರೀತಿಯುಂಟಾದರೆ ನೀತಿಯನ್ನೇ ಮರೆತುಬಿಡುತ್ತಾರೆ' ಎಂದು ಎಲ್ಲಿ ಭಾವಿಸುವನೋ ಎನಿಸಿ ಮನಸ್ಸನ್ನು ಹತೋಟಿಗೆ ತಂದುಕೊಳ್ಳುತ್ತಾಳೆ. ಆದರೂ ಒಮ್ಮೊಮ್ಮೆ ಗಾಳಿಗೊಡ್ಡಿದ ದೀಪಜ್ವಾಲೆಯಂತೆ ಹೊಯ್ದಾಡುತ್ತಾಳೆ. ಮುನಿಕುಮಾರನು ಕೋಪಗೊಂಡು ಕೊಡಬಹುದಾದ ಶಾಪವೂ ಹೆದರಿಕೆ ಮೂಡಿಸುತ್ತದೆ. ಆದರೂ ಧೈರ್ಯ ತಂದುಕೊಂಡು ಆತನ ಗೆಳೆಯನನ್ನು ಮಾತಾನಾಡಿಸಿ ಅವನ ವಿಚಾರ, ಅವನ ಕಿವಿಯ ಮೇಲಿದ್ದ ಹೂ ಗೊಂಚಲಿನ ಬಗ್ಗೆ ಆಸಕ್ತಿಯಿಂದ ಕೇಳಿ ತಿಳಿದು ಕೊಳ್ಳುತ್ತಾಳೆ. ಮುನಿಕುಮಾರನೂ ಅವಳ ಸೌಂದರ್ಯಕ್ಕೆ ಸ್ವಲ್ಪ ಸ್ವಲ್ಪವೇ ಜಾರುತ್ತಾನೆ. ಪುಷ್ಪಮಂಜರಿಯನ್ನು ಆಸೆಪಟ್ಟಳೆಂಬ ಕಾರಣಕ್ಕೆ ಅದನ್ನು ತೆಗೆದು ಅವಳ ಕಿವಿಗೆ ಮುಡಿಸುವಾಗ ಅವನಿಗೆ ಅವಳ ಕೆನ್ನೆಯ ಸ್ಪರ್ಶವಾದದ್ದೇ ಸ್ಪರ್ಶಸುಖದ ಉದ್ವೇಗದಿಂದ ಕೈ ನಡುಗುತ್ತದೆ. ಜಪಸರ ಜಾರಿ ಬೀಳುತ್ತದೆ. ಬೀಳುತ್ತಿದ್ದ ಜಪಸರವನ್ನು ಬೀಳದಂತೆ ಹಿಡಿದುಕೊಂಡು ಮಹಾಶ್ವೇತೆ ಅದನ್ನು ತನ್ನ ಕೊರಳಿಗೆ ಹಾಕಿಕೊಳ್ಳುತ್ತಾಳೆ. ಮುನಿಕುಮಾರ ಪುಂಡರೀಕ ಅವಳ ಸೌಂದರ್ಯ ಸುಳಿಯೊಳಗೆ ಸಿಲುಕಿಕೊಂಡು ಅನ್ಯಮನಸ್ಕತೆಯಿಂದಿದ್ದ. ಕಾರಣ ಜಪಸರದ ಪರಿವೆಯೇ ಇಲ್ಲದಾಗುತ್ತದೆ.

ತಾಯಿಯ ಕರೆ ಬರಲು ಮಹಾಶ್ವೇತೆ ಅಲ್ಲಿಂದ ಹೊರಟುಹೋದ ಮೇಲೆ, ಪುಂಡರೀಕನ ಸ್ಥಿತಿಯನ್ನು ಗಮನಿಸಿದ ಕಪಿಂಜಲ ಅವನಿಗೆ ಬುದ್ಧಿವಾದ ಹೇಳುತ್ತಾನೆ. "ಕಾಮ, ಪ್ರೇಮಗಳು ಪಾಮರರಿಗಲ್ಲದೆ ನಿನ್ನಂತಹವನಿಗಲ್ಲ. ಇಂದ್ರಿಯ ನಿಗ್ರಹಿಯೂ ಸಾಂಸಾರಿಕ, ಸುಖಗಳಲ್ಲಿ ಉದಾಸೀನನೂ, ನಿಷ್ಠಾವಂತ ಬ್ರಹ್ಮಚಾರಿಯೂ ಶಾಸ್ತ್ರ ವೇದ ವಿದ್ವಾಂಸನೂ, ವಿವೇಕವಂತನೂ ಆಗಿದ್ದ ನಿನಗೆ ಈ ಬಗೆಯ ಇಂದ್ರಿಯ ಕ್ಷೋಭೆ, ಚಿತ್ತಚಾಂಚಲ್ಯ ಅಸ್ವಸ್ಥತೆಗಳು ಸರಿಯೇ ? ಈಗಲಾದರೂ ಸಂಯಮವನ್ನು ರೂಢಿಸಿಕೋ" ಎಂದು ವಿವೇಕವನ್ನು ಹೇಳಲು, ತೋರಿಕೆಗೆ ವಿಧೇಯನಾಗಿ ಒಪ್ಪಿದಂತೆ. ಅವಳ ಮೇಲೆ ಸಿಟ್ಟಾದಂತೆ ಕಾಣಿಸಿ ಕೊಳ್ಳುತ್ತಾನೆ. ಗಳೆಯರನ್ನು ಮೆಚ್ಚಿಸಲು ನಟಿಸಿದನಾದರೂ ಮಹಾಶ್ವೇತೆಯ ಸವಿ ತರಳಿಕೆಯಿಂದ ಗುಟ್ಟಾಗಿ ಮಹಾಶ್ವೇತೆಯ ವಿವರಗಳನ್ನೆಲ್ಲ ಕೇಳಿ

ತಿಳಿದುಕೊಂಡಿರುತ್ತಾನೆ.ಒಂದು ರಹಸ್ಯ ಪತ್ರವನ್ನು ಬರೆದು ಅದರಲ್ಲಿ ತನ್ನ ಪ್ರೀತಿಯೆಲ್ಲವನ್ನು ತೋಡಿಕೊಂಡು ಮಹಾಶ್ವೇತೆಗೆ ತಲುಪಿಸಲು ಹೇಳುತ್ತಾನೆ. ಮಹಾಶ್ವೇತೆಗೆ ಆ ಪತ್ರವೇ ಅವನಾಗಿ ಭಾಸವಾಗುತ್ತದೆ. ಪತ್ರ ತಂದ ತರಳಿಕೆ ಪುಂಡರೀಕನನ್ನು ನೋಡಿ ಬಂದ ಭಾಗ್ಯವಂತೆ ಎನಿಸುತ್ತದೆ.

ಮಹಾಶ್ವೇತೆಯ ಸ್ಥಿತಿ ವಿರಹೋತ್ಕಟತೆಯಿಂದಾಗಿ ಚಿಂತಾಜನಕವಾಗುತ್ತದೆ. ಅದೇ ಸಮಯದಲ್ಲಿ ಪುಂಡರೀಕನ ಗೆಳೆಯ ಜಪಸರವನ್ನು ಮಹಾಶ್ವೇತೆಯಿಂದ ಕೇಳಿ ಪಡೆಯಲು ಬಂದವನು ತನ್ನ ಗೆಳೆಯನ ಸ್ಥಿತಿಯನ್ನೂ ರಹಸ್ಯವಾಗಿ ಬಣ್ಣಿಸುತ್ತಾನೆ. ತಮ್ಮಂತಹ ಋಷಿಮುನಿಗಳು ಮಾಡಬಾರದ ಕೆಲಸಕ್ಕೆ, ತಾನೇ ಮುಂದೆ ನಿಂತು ಮಾಡಬೇಕಾಗಿ ಬಂದ ತನ್ನ ಅಸಹಾಯಕತೆಯನ್ನು ಹೇಳಿಕೊಳ್ಳುತ್ತಾನೆ. 'ಜಟಾಧಾರಿಗಳಿಗೆ ನಾರುಮುಡಿ ಉಟ್ಟವರಿಗೆ, ತಪಸ್ವಿಗಳಿಗೆ ಯೋಗ್ಯವಲ್ಲದ ಕಾರ್ಯದಲ್ಲಿ, ಕಾಮಾತುರರ ತುಚ್ಛ ವ್ಯವಹಾರದಲ್ಲಿ ಸಹಾಯ ಮಾಡಲು ಹೊರಟ ತನ್ನ ದುರ್ವಿಧಿಯನ್ನು ಮತ್ತು ಮಹಾಶ್ವೇತೆಯಿಂದಾದ ವಿರಹಾಕುಲತೆಯನ್ನು ಸಹಿಸಲಾರದೆ ಯಾರಿಗೂ ಕಾಣಿಸದಂತೆ, ಬಳ್ಳಿಯ ಪೊದರಿನಲ್ಲಿ ನಿಶ್ಚೇಷ್ಟಿತನಾಗಿ, ಮರಣೋನ್ಮುಖಿ ಸ್ಥಿತಿಯಲ್ಲಿ, ಮೌನ ಕಂಬನಿಯ ಹೊನಲುಗಳನ್ನುಕ್ಕಿಸುತ್ತಾ, ಅನ್ನಾಹಾರಗಳಿಲ್ಲದೆ ಪೂರ್ತಿಯಾಗಿ ಕೃಶಿಸಿ ಹೋಗಿರುವುದನ್ನು ವಿವರಿಸಿ ಹೇಳುತ್ತಾನೆ. ಕಪಿಂಜಲನ ಮಿತ್ರಪ್ರೇಮ ಚಡಪಡಿಸುತ್ತದೆ. ಅವನಿಗಾಗಿ ಮರುಗುತ್ತಾನೆ. ನಿಯಮಬಾಹಿರವೂ, ಧರ್ಮಬಾಹಿರವೂ ಆದ ಗೆಳೆಯನ ಕಾರ್ಯದಲ್ಲಿ ಪಾಲುದಾರನಾಗುತ್ತಾನೆ. ಮಹಾಶ್ವೇತೆಗೆ ತನ್ನ ಗೆಳೆಯನ ಹೃದಯ ವಿದ್ರಾವಕ ಸ್ಥಿತಿಯನ್ನು ವರ್ಣಿಸಿ, ಅವಳನ್ನು ಒಪ್ಪಿಸಿ ಕರೆದೊಯ್ಯಬೇಕಲ್ಲದೆ ಬೇರೆ ಉಪಾಯವೇ ಇಲ್ಲವೆಂದೆನಿಸಿ ಕಪಿಂಜಲ ಮಹಾಶ್ವೇತೆಯಲ್ಲಿ ತನ್ನ ಗೆಳೆಯನ ಸ್ಥಿತಿಯನ್ನು ಹೀಗೆ ವಿವರಿಸಿ ತಿಳಿಸುತ್ತಾನೆ. "ಗುಣವಂತನೆನಿಸಿಕೊಂಡಿದ್ದ, ಜಾಣತನದ ಖನಿ ಎನಿಸಿಕೊಂಡಿದ್ದ, ಮುನಿಕುಮಾರರ ಸಮೂಹದಲ್ಲಿ ಅಗೇಸರನೆನಿಸಿಕೊಂಡಿದ್ದ ನನ್ನ ಸ್ನೇಹಿತನನ್ನು ಮನ್ಮಥನು ಈ ರೀತಿಯಲ್ಲಿ ಕ್ಷಣಮಾತ್ರದಲ್ಲಿ ಹೊಸಕಿ ಹಾಕುತ್ತಿರುವನಲ್ಲ." ಎಂದು ಹಲುಬಿ, ಹತೋಟಿಯಿಲ್ಲದೆ ಅತ್ತು ಅತ್ತು ಕಣ್ಣು ಕೆಂಪಾಗಿರುವುದನ್ನು ದೇಹದ

ಅಂಗಾಂಗಗಳೆಲ್ಲ ದಹಿಸಿ ಹೋಗುತ್ತಿರುವುದನ್ನು ದೇಹತಾಪ. ಮನೋತಾಪಗಳ ನಿವಾರಣೆಗೆ ಚಂದ್ರಕಾಂತಶಿಲೆಯ ಮೇಲೆ ತಂಪಾದ ಕಮಲದಂಟುಗಳನ್ನು, ನೀರಿನ ಹನಿಗಳಿಂದ ಕೂಡಿದ ತಾವರೆ ಎಲೆಗಳನ್ನು, ಸುವಾಸನಾಯುಕ್ತ ಬಿಳಿದಾವರೆ, ಕನ್ನೈದಿಲೆ ಹೂಗಳನ್ನು ಒಡ್ಡಿ ಮಾಡಿದ ಹಾಸಿನ ಮೇಲೆ ಮಲಗಿಸಿ, ಗಂಧದ ಮರದ ಚಿಗುರುಗಳನ್ನು ಹಿಂಡಿ ತಂಪನ್ನು ಹನಿಸಿದರೂ, ಆ ತಂಪೆಲ್ಲವೂ ಮತ್ತಷ್ಟು ಬೇಗೆಯನ್ನೇ ಹೆಚ್ಚಿಸುತ್ತಿದ್ದ ವಿಷಯವನ್ನೆಲ್ಲ ವಿಷದವಾಗಿ ವಿವರಿಸಿ,ತನಗೆ ದಿಕ್ಕು ತೋಚದಂತೆ ಆಗಿರುವ ಕಾರಣ ಅವನ ಪ್ರಾಣ ಉಳಿಸಲು, ಹೇಗಾದರೂ ಮಾಡಿ ಬರಲೇ ಬೇಕೆಂದು ಮಹಾಶ್ವೇತೆಯನ್ನು ಒತ್ತಾಯಿಸುತ್ತಾನೆ.

ಮಹಾಶ್ವೇತೆಗೆ ಕಪಿಂಜಲನ ಮಾತುಗಳನ್ನು ಕೇಳಿದ ಮೇಲೆ ಮುನಿಕುಮಾರನ ಬಗೆಗೆ ತಳೆದಿದ್ದ ಪ್ರೀತಿ ಮತ್ತಷ್ಟು ಹೆಚ್ಚಾಗಿ ಅದರೊಂದಿಗೆ ಅವಳ ವಿರಹವೂ ವಿಹ್ವಲ ಸ್ಥಿತಿಗೆ ಕೊಂಡೊಯ್ಯುತ್ತದೆ. ಆದರೂ ಹೆಣ್ಣಾದ ತಾನು ಏನು ತಾನೇ ಮಾಡಬಹುದು. ಕಾಡಿನಲ್ಲಿ ಅಲೆದಾಡುತ್ತಾ, ನಾಗರೀಕತೆಯ ಯಾವ ಸೋಂಕೂ ಇಲ್ಲದೆ ಗೆಡ್ಡೆ ಗೆಣಸುಗಳನ್ನು ತಿಂದು ಬದುಕುತ್ತಿದ್ದ ಪುಂಡರೀಕನಿಗೂ, ಗಂಧರ್ವರಾಜನ ಮಗಳಾಗಿ, ಮಹಿಳಾರತ್ನ, ಚತುರೆ ಎಂದೆನಿಸಿಕೊಂಡ ತನಗೂ ಎಲ್ಲಿಗೆಲ್ಲಿಯ ನಂಟು ? ಆದರೂಕಾಮ, ಪ್ರೇಮ, ವಿರಹಗಳು ಇಬ್ಬರನ್ನೂ ಅತಿಯಾಗಿ ಕಾಡುತ್ತಿವೆ. ಅವನ ಪ್ರಾಣಾಂತಿಕ ಸ್ಥಿತಿಯನ್ನು ಕೇಳಿದ ಮೇಲೆ ಕೂಡಲೇ ಅಲ್ಲಿಗೆ ಧಾವಿಸಿ ಅವನ ದುಃಖ ಶಮನ ಮಾಡುವುದು ತರವೆನಿದರೂ, ಕೂಡಲೇ ನಿರ್ಧಾರವನ್ನು ತೆಗೆದುಕೊಳ್ಳಲು ಹಿಂಜರಿಯುತ್ತಾಳೆ. ತಾನು ಏನನ್ನು ಮಾಡಬೇಕೆನ್ನವುದು ತಿಳಿಯದೆ ಹೊಯ್ದಾಡುತ್ತಾಳೆ. ಇದಕ್ಕೆ ಸಮಾಧಾನ ತರಳಿಕೆಯಿಂದ ಸಾಧ್ಯವಾಗಬಹುದೇನೋ ಎನಿಸಿ, ತನ್ನ ಪರಿಸ್ಥಿತಿಯನ್ನು ವಿವರಿಸುತ್ತಾಳೆ. ತನ್ನ ಇಂದ್ರಿಯಗಳು ತನ್ನ ಸ್ವಾಧೀನದಲ್ಲಿ ಇಲ್ಲ. ಸಾಧಾಡಿ ಹುಡುಗಿಯಂತೆ ನಾಚಿಕೆಯನ್ನು ಬಿಟ್ಟು ವಿನಯವನ್ನು ದೂರಮಾಡಿ, ಜನಾಪವಾದವನ್ನೂ ಲೆಕ್ಕಿಸದೆ, ಸಂಪ್ರದಾಯವನ್ನು ಮರೆತು, ಶೀಲವನ್ನು ಬಿಟ್ಟು, ಕುಲಪದ್ಧತಿಯನ್ನು ಪರಿಪಾಲಿಸದೆ ಪ್ರೀತಿಗೆ ಕುರುಡಾಗಿ, ಅವಿವಾಹಿತಳಾದವಳು, ಹೇಳದೆ ಕೇಳದೆ ಹೋಗಿ ತನ್ನ ಪ್ರಿಯಕರನೊಂದಿಗೆ ಮದುವೆಯಾದರೆ ಅಧರ್ಮವಾಗುತ್ತದೆ. ಗುರುಹಿರಿಯರನ್ನು ಮೀರುವುದು

ಸಾಧ್ಯವೇ ಇಲ್ಲವಾದ್ದರಿಂದ ತನಗೆ 'ಮರಣವೇ ಶರಣು' ಎಂದು ಹೇಳಿಕೊಳ್ಳುತ್ತಾಳೆ. ಆದರೆ ತನ್ನಿಂದ ಕಪಿಂಜಲನಿಗೆ ಯಾವ ಉತ್ತರವೂ ದೊರೆಯದ ಕಾರಣ, ಪುಂಡರೀಕ ಆತ್ಮಹತ್ಯೆ ಮಾಡಿಕೊಂಡರೆ ತನಗೆ ಬ್ರಹ್ಮಹತ್ಯಾದೋಷವುಂಟಾಗುತ್ತದೆ. ಎಂದು ಹೆದರಿ ಕಂಪಿಸುತ್ತಾಳೆ. ಅಸಹಾಯಕತೆ, ಅಸಮರ್ಥತೆಗಳಿಂದ ಚಡಪಡಿಸುತ್ತಾಳೆ. ಈಗ ಅವಳಿಗೆ ತರಳಿಕೆಯ ಸಲಹೆ ಬಹಳ ಅಮೂಲ್ಯವೆನಿಸುತ್ತದೆ. ತರಳಿಕೆಯೂ ತನ್ನ ಒಡತಿ ಮತ್ತು ಗೆಳತಿಯೂ ಆಗಿರುವ ಮಹಾಶ್ವೇತೆಗೆ ಸಮಾಧಾನ ಹೇಳಲು ಮುಂದಾಗುತ್ತಾಳೆ. ಅತ್ಯಧಿಕ ನಾಚಿಕೆ, ತಂದೆ ತಾಯಿಗಳ ಭಯ ಎಲ್ಲವುಗಳನ್ನು ಬದಿಗಿಟ್ಟು, ವಿಳಂಬ ಮಾಡದೆ ಅವನಲ್ಲಿಗೆ ಹೋಗುವುದೇ ಲೇಸೆಂದು ನುಡಿದ ನುಡಿ ಸಂಜೀವಿನಿಯಂತೆ ಅವಳ ಹೋದ ಪ್ರಾಣವನ್ನು ಮರಳಿಸುತ್ತದೆ.

ವ್ಯಕ್ತಿ, ಸಮಾಜ, ಅಂತಸ್ತುಗಳ ಮರ್ಯಾದೆಯನ್ನು ಅತಿಕ್ರಮಿಸಿ ತನಗಾಗಿ ಕರಗಿ ಕೊರಗಿ ಸಾಯುವ ಸ್ಥಿತಿಯಲ್ಲಿರುವ ಪ್ರಿಯಕರನನ್ನು ಉಳಿಸಲು ಕಾತರದಿಂದ ಹೆಜ್ಜೆ ಹಾಕುತ್ತಾಳೆ. ಹೊರಟಾಗಲೇ ಬಲಗಣ್ಣು ಅದುರಲು ಅಪಶಕುನವೆಂದು ಅಂಜುತ್ತಾಳೆ. ಎಲ್ಲೆಲ್ಲೂ ಚೆಲ್ಲಿದ ಬೆಳೆದಿಂಗಳ ರಾತ್ರಿ, ಜನರೆಲ್ಲ ಶ್ವೇತದ್ವೀಪವಲ್ಲಿರುವರೇನೋ ಎಂಬ ಭಾವನೆವುಂಟು ಮಾಡುತ್ತಿತ್ತು. ಚಂದ್ರನೇ ತನ್ನ ಕೈ ಹಿಡಿದು ಇನಿಯನೆಡೆಗೆ ಎಳೆದುಕೊಂಡು ಹೋಗುವಂತೆನಿಸಿದಾಗ, ತನ್ನ ಇನಿಯನನ್ನೇ ಹೀಗೆ ಕೈ ಹಿಡಿದು ಎಳೆದುಕೊಂಡು ಬರಬಾರದೇಕೆ ಎಂದು ಪ್ರಶ್ನಿಸಿಕೊಳ್ಳುತ್ತಾಳೆ. ಹಾದಿಯಲ್ಲಿ ಏನೆಲ್ಲವನ್ನು ಯೋಚಿಸುತ್ತ ಆತುರ ಕಾತುರಗಳಿಂದ ಸಾಗುತ್ತಿರುವಾಗ, ಕಾಡಿನ ಮಧ್ಯದಿಂದ ಗಂಡಸು ಅಳುವ ಧ್ವನಿ ಕೇಳಿಸಿ, ಮಹಾಶ್ವೇತೆಯ ಎದೆ ಹೊಡೆದು ಕೊಳ್ಳುತ್ತದೆ. ಅನಿಷ್ಟದ ಕಲ್ಪನೆಯಿಂದ ಕಂಪಿಸುತ್ತಾಳೆ. ಮತ್ತಷ್ಟು ಕಿವಿಗೊಟ್ಟು ಆಲಿಸಿದಾಗ "ಅಯ್ಯೋ, ಉರಿದು ಹೋದೆ, ಬೆಂದು ಹೋದೆ, ಮಹಾಶ್ವೇತೆ ನಿನಗೇನು ಅನ್ಯಾಯ ಮಾಡಿದ್ದಾಳೆ ? ಭಯಂಕರ ಚಂದ್ರನೇ, ನಿನ್ನ ಇಷ್ಟಾರ್ಥ ನೆರವೇರಿತೆ? ತಂಗಾಳಿಯೇ ಆನಂದವಾಯಿತೇ? ಗೆಳೆಯಾ ನೀನು ನನ್ನನ್ನು ಹೀಗೆ ಬಿಟ್ಟು ಹೋಗಬಹುದೇ ? ನನಗಿನ್ನಾರು ದಿಕ್ಕು? ಪುಂಡರೀಕ ನಿನ್ನ ಸ್ನೇಹವೆಲ್ಲಿ ಹೋಯಿತು? ಎಂದೆಲ್ಲ ವಿಲಪಿಸುತ್ತಾ, ಬಾಯಿ ಬಿಡುತ್ತಿರುವ ಕಪಿಂಜಲನ ಧ್ವನಿ ಕೇಳಿಸಿ, ಬಳಿಗೆ

ಹೋದಾಗ ಅವಳ ಕಣ್ಣಿಗೆ ಬಿದ್ದದ್ದು ನಿಷ್ಪ್ರಾಣನಾಗಿ ! ಪ್ರಾಣಗಳು ಇದ್ದರೆ ಕಾಮಭಾದೆಯಿಂದ ಆಯಾಸವಾಗುತ್ತದೆ. ಆದ್ದರಿಂದ ಆಯಾಸದ ಬಂಧನವಿರಬಾರದೆಂದು ಭಾವಿಸಿ ಪ್ರಾಣವನ್ನು ದೇಹದಿಂದ ಹೊರದೂಡಿ ನಿಶ್ಚಲ ಸಮಾಧಿ ಸುಖದಲ್ಲಿ ಇರುವನೆಂಬಂತೆ ಕಾಣಿಸುತ್ತಿದ್ದ. ಅವನನ್ನು ಆ ಸ್ಥಿತಿಯಲ್ಲಿ ಕಂಡದ್ದೇ ಮಹಾಶ್ವೇತೆ ಮೂರ್ಛಿತಳಾಗಿ ಬಿಡುತ್ತಾಳೆ. ಸ್ವಲ್ಪ ಸಮಯದ ನಂತರ ಎಚ್ಚೆತ್ತು ವಿಲವಿಲನೆ ಒದ್ದಾಡಿ, ವಿಲಪಿಸ ತೊಡಗುತ್ತಾಳೆ. ಅವನಿಗಾಗಿದ್ದ ತನ್ನ ಪ್ರೀತಿ, ವಿರಹಗಳನ್ನು ತೋಡಿಕೊಳ್ಳುತ್ತಾಳೆ. ನಿಸರ್ಗದ ಎಲ್ಲ ಸತ್ವಗಳಿಗೂ ಮೊರೆ ಇಟ್ಟು ಕೊಳ್ಳುತ್ತಾಳೆ. "ನೆರೆದೆಲ್ಲರುಮೆನಗೆ ಪುರುಷ ಭಿಕ್ಷಮಸಿಕ್ಕಿ" ಎಂದು ಪದೇ ಪದೇ ವನ ದೇವತೆಯರನ್ನು ಯಾಚಿಸುತ್ತಾಳೆ. ಕಡೆಗೆ ಪುಂಡರೀಕನ ಶರೀರದೊಂದಿಗೆ ತಾನೂ ಚಿತೆಯೇರಲು ನಿಶ್ಚಯಿಸುತ್ತಾಳೆ. ಆದರೆ ಅವಕ್ಕೆ ಅವಕಾಶವಿಲ್ಲದಂತೆ ಒಂದು ಅದ್ಭುತ ಘಟನೆ ನಡೆದು ಕಥೆ ಮತ್ತೊಂದು ತಿರುವು ಪಡೆಯುತ್ತದೆ.

ಚಂದ್ರಮಂಡಲದ ಮಧ್ಯದಿಂದ ಆಕಾಶ ಮಾರ್ಗವಾಗಿ ದಿವ್ಯ ಪುರುಷನೊಬ್ಬನು ತನ್ನ ಶ್ವೇತ ಕರಗಳನ್ನು ಚಾಚಿ ಪುಂಡರೀಕನ ಕಳೇಬರವನ್ನು ಎತ್ತಿಕೊಂಡು, ಮಹಾಶ್ವೇತೆಗೆ ಸಾಯಬಾರದೆಂದೂ, ಇವನೊಂದಿಗೆ ಮತ್ತೆ ಸೇರುವ ಸುಯೋಗವಿದೆಯೆಂದು ತಿಳಿಸಿ ಆಕಾಶಕ್ಕೇರಿ ಬಿಡುತ್ತಾನೆ. ಕಪಿಂಜಲ ಗೆಳೆಯನನ್ನು ಎಲ್ಲಿಗೆ ಕೊಂಡೊಯ್ಯುತ್ತಿರುವೆ ಎಂದು ಪ್ರಶ್ನಿಸುತ್ತಾ ಅವನನ್ನು ಬಿಡದೆ, ಅವನೂ ಆಕಾಶಕ್ಕೆ ಆ ಮಹಾ ಪುರುಷನನ್ನು ಹಿಂಬಾಲಿಸಿ ಏರಿಹೋಗುತ್ತಾನೆ.

ಮಹಾಶ್ವೇತೆಯ ದುಃಖ ಇದರಿಂದ ಇನ್ನಷ್ಟು ಹೆಚ್ಚಾಗುತ್ತದೆ. ಆದರೂ ಬದುಕಿ ಉಳಿಯುವುದು ಮಹಾಶ್ವೇತೆಗೆ ಅನಿವಾರ್ಯವಾಗುತ್ತದೆ. ಮಹಾಪುರುಷನ ಭವಿಷ್ಯವಾಣಿ, ಮತ್ತು ತರಳಿಕೆಯ ಸಮಾಧಾನಗಳು, ಪ್ರಾಣಕಾಂತನ ಹೋದ ಪ್ರಾಣವನ್ನು ಮರಳಿ ಬರುವಂತೆ ಮಾಡಲು, ಜೀವ ಬರಿಸಿ ತನ್ನಲ್ಲಿಗೆ ಕಳಿಸುವ ಉದ್ದೇಶದಿಂದಲೇ ಆ ಲೋಕೋತ್ತರ ಪುರುಷ ಸಾವನ್ನಪ್ಪಿದ ಇನಿಯನನ್ನು ಕೊಂಡೊಯ್ದಿದ್ದಾನೆ ಎಂಬ ನಂಬಿಕೆಯೂ, ತನ್ನ ಜೀವವನ್ನು ಕಾಪಾಡಿಕೊಳ್ಳಲು ಪ್ರಚೋದನೆ ಯಾಯಿತು.

ಈ ಘಟನೆಯಾದ ಕ್ಷಣದಿಂದ ಮಹಾಶ್ವೇತೆ ಎಲ್ಲವನ್ನೂ, ಎಲ್ಲ ಬಂಧುಗಳನ್ನೂ, ಬಂಧನಗಳನ್ನೂ ಕಳಚಿಕೊಂಡು ಅವನ ಮೇಲಿನ ಪ್ರೀತಿಯಿಂದಾಗಿ ಅವನದೇ ಬದುಕಿನ ಶೈಲಿಯನ್ನು ಅಳವಡಿಸಿಕೊಂಡು, ನಾರುವಸ್ತ್ರಗಳನ್ನುಟ್ಟು, ಜಟಾಧಾರಿಯಾಗಿ, ಭಸ್ಮಶಯ್ಯೆಯಲ್ಲಿ ಪವಡಿಸುತ್ತಾ, ಕಂದಮೂಲ, ಹಣ್ಣು ಹಂಪಲುಗಳನ್ನು ಸೇವಿಸುತ್ತಾ, ಪರಶಿವನ ಧ್ಯಾನದಲ್ಲಿ, ನಿರಂತರ ತಪೋನಿಷ್ಠೆಯಲ್ಲಿ ತೊಡಗಿ ಇನಿಯನನ್ನು ಸೇರುವ ಕ್ಷಣಗಳಿಗಾಗಿ, ಜನ್ಮಾಂತರಕ್ಕಾಗಿ ಕಾಯುತ್ತಿರುತ್ತಾಳೆ.

ಇಡೀ ಕನ್ನಡ ಸಾಹಿತ್ಯದಲ್ಲಿ ಮಹಾಶ್ವೇತೆಯ ಪ್ರಸಂಗ ಜನಜನಿತವಾಗಿದೆ. ಪ್ರೀತಿಗಾಗಿ ಮಾಡುವ ತ್ಯಾಗ, ತಪಸ್ಸುಗಳು ಅನನ್ಯವಾದವುಗಳು. ಪ್ರೀತಿಸಿದ ಇವರಿಬ್ಬರೂ ಮೇಲುನೋಟಕ್ಕೆ ಕಾಮಾರ್ತರಂತೆ ಕಂಡರೂ, ಅದು ಕಾಮವಲ್ಲ, ಪ್ರೇಮ, ಪ್ರೀತಿ. ಕಾಮವೂ ಸ್ತ್ರೀ-ಪುರುಷ ಸಂಬಂಧದಲ್ಲಿ ಪ್ರೀತಿಯ ಅಭಿವ್ಯಕ್ತಿಯ ವಿಧಾನ, ಬರೀ ಕಾಮವಾಗಿದ್ದ ಪಕ್ಷದಲ್ಲಿ ಇಂತಹ ತ್ಯಾಗದ ಅನಿವಾರ್ಯತೆ ಇರುತ್ತಿರಲಿಲ್ಲ. 'ಪುಂಡರೀಕನು' ಮರಳಿ ಬರುವ ನಿರೀಕ್ಷೆಯೇ ಮಹಾಶ್ವೇತೆಗೆ ಆಲಂಬನ; ಆಧಾರ".

★ ★ ★

ನೆರೆ - ೪

# ಪವೆ(೪)ಗಂ ಪಾಪಕ್ಕಮಂಜದವರೇಗೆಯ್ಯರ್

‘ಪ್ರೀತಿ’ ಎನ್ನುವುದು ಇಬ್ಬರ ನಡುವೆ ಸಹಜವಾಗಿ ಅನಾಯಾಸವಾಗಿ ಉದ್ಭವಿಸುವ ಒಂದು ಬಗೆಯ ಆಕರ್ಷಣೆ, ಸೆಳೆತ. ಎರಡು ಹೃದಯಗಳ ಪ್ರತಿಸ್ಪಂದನ ಒಬ್ಬರಿಗೊಬ್ಬರು ಬೇಕೆನಿಸುವ ಭಾವ; ಇಬ್ಬರಲ್ಲಿಯೂ ಒಂದೇ ಬಗೆಯ ತುಡಿತ-ಇವೆಲ್ಲ ಇದ್ದಾಗಲೇ ಪ್ರೀತಿಯ ಪರಿಪೂರ್ಣ ಅನುಭೂತಿಯ ಅರ್ಥವಂತಿಕೆ ಸಾಧ್ಯ. ಇಬ್ಬರ ಎದೆಯಾಳದಿಂದ ಚಿಲುಮೆಗಳಾಗಿ ಚಿಮ್ಮಿ ಹೊನಲುಗಳಾಗಿ ಹರಿದು ಒಂದೆಡೆ ಒಂದಾಗಿ ಕೂಡುವುದೇ ಸಂಗಮ; ಪ್ರೀತಿಯ ಸಂಗಮ || ಆದರೆ ಕೆಲವೊಮ್ಮೆ ಪ್ರೀತಿ ಒಮ್ಮುಖವಾಗಿಯೇ ಇರುತ್ತದೆ. ಗಂಡು ಹೆಣ್ಣಿನ ಸಂಬಂಧದಲ್ಲಿ, ಇಬ್ಬರೂ ಒಬ್ಬರನ್ನೊಬ್ಬರು ಪ್ರೀತಿಸಿದಾಗ ಹೃದಯಗಳು ತುಂಬುತ್ತವೆ. ಪರಿಪೂರ್ಣತೆಯ, ತೃಪ್ತಿಯ, ಸಾರ್ಥಕತೆಯ, ಸಂತೋಷದ ಭಾವಗಳು ಧನ್ಯತೆಯ ಅನುಭೂತಿಗೆ ದಾರಿ ಮಾಡುತ್ತವೆ. ಆದರೆ ಕೆಲವೊಮ್ಮೆ ಹೆಣ್ಣು ಗಂಡನ್ನು ಪ್ರೀತಿಸಿ, ಗಂಡು ಹೆಣ್ಣನ್ನು ಪ್ರೀತಿಸದೆ ಹೋಗಬಹುಮು. ಹಾಗೆಯೇ ಗಂಡು ತಾನು ಪ್ರೀತಿಸುವ ಹೆಣ್ಣು ತನ್ನನ್ನು ಪ್ರೀತಿಸದೆ ಹೋಗಬಹುದು. ಹೀಗಾದಾಗ ಪ್ರೀತಿಯು ಸಾರ್ಥಕವಾಗುವುದೇ ಇಲ್ಲ. ಇಬ್ಬರ ನಡುವೆ ಜಗ್ಗಾಟ, ಘರ್ಷಣೆಗಳೇ ಸಂಭವಿಸುತ್ತವೆ. ಒಂದು ವೇಳೆ ಪುರುಷನಾಗಲೀ ಸ್ತ್ರೀಯಾಗಲೀ ತಾನು ಪ್ರೀತಿಸುವವರನ್ನು ಒತ್ತಾಯದಿಂದಲೋ, ಹಠಮಾರಿತನದಿಂದಲೋ, ಬಲಪ್ರಯೋಗದಿಂದಲೋ ದಕ್ಕಿಸಿಕೊಳ್ಳುವುದಕ್ಕೆ ಪ್ರಯತ್ನಿಸಿದಾಗ ಮಾನ ಹಾನಿ, ಪ್ರಾಣ ಹಾನಿ ಇತ್ಯಾದಿ ದುರಂತಗಳೇ ಸಂಭವಿಸುತ್ತವೆ. ಅದರಲ್ಲಿಯೂ ಅಹಂಕಾರಮೂಲವಾದ ಭರವಸೆಯೊಂದಿಗೆ ಹೊರಟಾಗ ಪರಿಣಾಮ ಇನ್ನೂ ಭಯಂಕರವಾಗಿರುತ್ತದೆ. ಇತ್ತೀಚಿನ ದಿನಗಳಲ್ಲಿ ದಿನಂಪ್ರತಿ ಸುದ್ದಿಯಾಗಿ ಬರುತ್ತಿರುವ, ಪುರುಷರಿಂದ ಮಹಿಳೆಯರ ಮೇಲೆ, ಅಪ್ರಾಪ್ತ ವಯಸ್ಸಿನ ಬಾಲಕಿಯರ ಮೇಲೆ ನಡೆಯುತ್ತಿರುವ ಲೈಂಗಿಕ ಅತ್ಯಾಚಾರಗಳು ಈ ಬಗೆಯ ಒಮ್ಮುಖದ ಬಯಕೆಗಳಾಗಿವೆ. ಈ

ಅತ್ಯಾಚಾರಗಳಲ್ಲಿ ಕೆಲವು ನಿಜವಾದ ಪ್ರೀತಿಯಿಂದ ನಡೆದಿರಬಹುದು ಇಲ್ಲವೆ 'ವಿಕೃತಕಾಮ' ದಿಂದ ನಡೆದಿರಬಹುದು. ಇಂತಹ ಅತ್ಯಾಚಾರಗಳಿಗೆ ಬಲಿಯಾದ ಪಾಪದವರು (ಅಸಹಾಯಕರು) ಅವಮಾನ ಸಹಿಸಿಕೊಳ್ಳದೆ ಆತ್ಮಹತ್ಯೆಗೆ ಅಥವಾ ಸಮಾಜ ಬಹಿಷ್ಕಾರಕ್ಕೆ ಒಳಗಾಗುತ್ತಾರೆ. ಆದಮ್ಯ ಪ್ರೀತಿ, ಬಯಕೆಗಳು ತಾವು ಪ್ರೀತಿಸುವವರಿಂದ ತೀರದೆ ಹೋದಾಗ, ಅವರನ್ನೇ ಹೊಸಕಿಹಾಕುವ ಕೌರ್ಯಕ್ಕೆ ಮುಂದಾಗುತ್ತಾರೆ. ತಮಗೆ ದಕ್ಕದ್ದು ಬೇರೆಯವರಿಗೂ ದಕ್ಕಬಾರದು ಎಂಬುದೆ ಇಂತಹ ಕ್ರೂರ ವರ್ತನೆಯ ಹಿಂದಿನ ಪ್ರಚೋದನೆ. ಪ್ರೀತಿಯೇ ವಿಚಿತ್ರವಾದ್ದು. ಪ್ರೀತಿಸುವುದೆಲ್ಲ ಸುಂದರವಾಗಿರುತ್ತದೆ. ಪ್ರೀತಿಸುವವರೆಲ್ಲ ಸೌಂದರ್ಯದಿಂದ ಕೂಡಿರುತ್ತಾರೆ ಎನ್ನುವಂತಿಲ್ಲ. ನಮ್ಮರಿವಿಗೆ ಬರದೆಯೇ ಪ್ರೀತಿ ತನ್ನ ಕೆಲಸವನ್ನು ಮಾಡಿರುತ್ತದೆ. ಬೀಸಬೇಕಾದ ಮೋಹದ ಬಲೆ ಬೀಸಿರುತ್ತದೆ.

'ಪ್ರೀತಿಯೆಂಬುದೊಂದು ಗುಣಾತ್ಮಕ ಮೌಲ್ಯವೇ' ಆದರೆ ಒಮ್ಮೊಮ್ಮೆ ಈ 'ಪ್ರೀತಿ' ಅದಮ್ಯವಾಗಿ ಅಸಹನೀಯವಾಗಿ ಪರಿವರ್ತಿತವಾದಾಗ ಶುದ್ಧ ಚರಿತ್ರಾತ್ಮನು ಮಹಾ ಮೇಧಾವಿ, ಅತುಲಬಲ ಪರಾಕ್ರಮಿಯೂ, ಪರವಧೂ ಸೋದರನೂ ಆಗಿದ್ದವನು ಒಂದು ಕ್ಷಣದ ಮನೋ ದೌರ್ಬಲ್ಯದ ಜೊತೆಗೆ ವಿಧಿ ವಿಲಸನವೂ ಸೇರಿಕೊಂಡು ವರ್ಷಾನುಗಟ್ಟಲೆಯ ತಪಸ್ಸು, ಶ್ರಮ ಪೌರುಷಗಳಿಂದ ಗಳಿಸಿಕೊಂಡ ಧವಳ ಕೀರ್ತಿಗೆ ಮಸಿ ಹತ್ತಿಸಿಕೊಳ್ಳುವುದಷ್ಟೇ ಅಲ್ಲ.ಸಾವಿನ ದುರಂತಕ್ಕೂ ಸಜ್ಜುಗೊಳ್ಳಬೇಕಾಗುತ್ತದೆ. ಇವಕ್ಕೆ ಸಾಕ್ಷಿಯಾಗಿ ವೈದಿಕ ಪರಂಪರೆಯ ವಾಲ್ಮೀಕಿ ರಾಮಾಯಣ ಅಥವಾ 'ಪಂಪರಾಮಾಯಣ'ದ ರಾವಣನಿದ್ದಾನೆ.

ಎರಡೂ ಪರಂಪರೆಯ ರಾಮಾಯಣಗಳಲ್ಲಿ 'ರಾವಣನಿಂದ ಸೀತಾಪಹರಣ' ಪ್ರಸಂಗ, 'ರಾವಣ ವಧೆ' ಸಾಮಾನ್ಯವಾದುದೇ ಆದರೆ ರಾವಣನ ಪಾತ್ರ ಮಾತ್ರ ವಾಲ್ಮೀಕಿ ಮತ್ತು ನಾಗಚಂದ್ರನ ಕಾವ್ಯಗಳಲ್ಲಿ ಅವರವರ ಮನೋಧರ್ಮ, ತಾವು ಪ್ರತಿನಿಧಿಸುವ ಧಾರ್ಮಿಕ ಪರಂಪರೆಗಳಿಗನುಗುಣವಾಗಿ ಚಿತ್ರಿತವಾಗಿದೆ. ಪ್ರಸ್ತುತ ಸಂದರ್ಭದಲ್ಲಿ ನಾಗಚಂದ್ರನ 'ರಾವಣ' ತನ್ನ ಉಜ್ವಲ ವ್ಯಕ್ತಿತ್ವದಿಂದ ಸ್ತ್ರೀ ಪರವಾದ ಅವನ ನಿಲುವುಗಳಿಂದ ಜೊತೆಗೆ 'ವಿಧಿ'ಯ ಕಾರಣದಿಂದ ಒಳಗಾಗಿಸಿಕೊಂಡ

ಒಂದೇ ಒಂದು ದೌರ್ಬಲ್ಯದಿಂದ ನಮಗೆ ಮುಖ್ಯವಾಗುತ್ತನೆ.

ಜೈನ ರಾಮಾಯಣಗಳಲ್ಲಿ ಅತ್ಯಂತ ಪ್ರಾಚೀನವಾದ, ಪ್ರಾಕೃತ ಭಾಷೆಯಲ್ಲಿನ, ವಿಮಲ ಸೂರಿಯ 'ಪಉಮಚರಿಯ' ಎಂಬ ರಾಮಾಯಣ ಕೃತಿಯೇ ನಾಗಚಂದ್ರನಿಗೆ ಪ್ರೇರಣೆ ಅವನನ್ನು ಅನುಸರಿಸುತ್ತಲೇ ತನ್ನ ಸ್ವಂತ ಪ್ರತಿಭೆಯನ್ನು ಸೇರಿಸಿ 'ರಾವಣ ಪಾತ್ರ' ಶಿಲ್ಪವನ್ನು ವಾಲ್ಮೀಕಿ ರಾಮಾಯಣದ ರಾವಣನಿಗಿಂತ ಭಿನ್ನವಾಗಿ ಕಡೆದಿರಿಸಿದ್ದಾನೆ. ಇಲ್ಲಿನ ರಾವಣನಲ್ಲಿ ಪ್ರೀತಿಯನ್ನು ಎರಡು ರೀತಿಗಳಲ್ಲಿ ಕಾಣುತ್ತೇವೆ. ಒಂದು ತಾನು ಬಯಸಿದ ಪ್ರೀತಿ ಮತ್ತೊಂದು ತನ್ನನ್ನು ಬಯಸಿದ ಪ್ರೀತಿ. ರಾವಣನು ಶೂರ, ವೀರ, ಸಕಲಶಾಸ್ತ್ರ ಕೋವಿದ. ಎಲ್ಲಕ್ಕಿಂತ ಹೆಚ್ಚಾಗಿ ಉದಾರಿ; ಅಹಿಂಸಾವಾದಿ ಪರನಾರಿ ಸೋದರ. ಕೈಹಿಡಿದ ಮಡದಿಯರ ಹೊರತು ಬೇರೆಯವರೆಡೆ ಕಣ್ಣೆತ್ತಿಯೂ ನೋಡದವನು. ಸೀತೆಯ ಸೌಂದರ್ಯ ಕಣ್ಣಿಗೆ ಬೀಳುವವರೆಗೆ ಅವನು ಎಂದೂ ಜಾರನಾಗಿರಲಿಲ್ಲ ; ಪಾಪಿಯಾಗಿರಲಿಲ್ಲ. "ಹಲವು ವಿದ್ಯಾಧರ ಸ್ತ್ರೀಯರೂ ಅಮೆರಿಯರೂ ಮಾನವ ಸ್ತ್ರೀಯರು ಅವನ ಪ್ರೀತಿ ಬಯಸಿ ಮೇಲೆ ಬಿದ್ದು ಬಂದರೂ ಅವರೆಡೆಗೆ ಸೋಲದ" ವ್ಯಕ್ತಿತ್ವ. ಇಂತಹವನು ವಿಧಿವಶದಿಂದ ಸೀತೆಯ ಮೋಹಕ್ಕೆ ಬಿದ್ದು ಸತ್ಯಶೌಚಗುಣ ಸಂಪತ್ತುಗಳನ್ನು ಕೀರ್ತಿಯನ್ನು ಕಳೆದುಕೊಳ್ಳುತ್ತಾನೆ.

ತನ್ನ ತಂಗಿಯಾದ ಚಂದ್ರನಖಿಗೆ ರಾಮ ಲಕ್ಷ್ಮಣರಿಂದ ಉಂಟಾದ ಅನ್ಯಾಯ, ಅವಮಾನ, ಪುತ್ರವಿಯೋಗ, ಪತಿ ವಿಯೋಗ ವಾರ್ತೆ ಯರಿತು, ಸಿಡಿಗೆದ್ದು, ಮುಯ್ಯಿ ತೀರಿಸಿಕೊಳ್ಳಬೇಕೆಂದು ನಿಶ್ಚಯಿಸಿ ಖಚರನಾ. ಕರನ್ನೆಲ್ಲ ಬರಮಾಡಿಕೊಂಡು ಸಿಂಹ ಪೀಠದಿಂದ ಮೇಲೆ ಎದ್ದ ರಾವಣ ಕವಿಯ ಕಣ್ಣಿಗೆ 'ಅಸ್ತಮಿತ ಪುಣ್ಯ' ನಂತೆ ಕಾಣುತ್ತಾನೆ. ಪುಷ್ಪಕ ವಿಮಾನವು ದಂಡಕಾರಣ್ಯ ಪ್ರವೇಶಿಸುತ್ತಿದ್ದಂತೆ, ಅವನ ಕಣ್ಣಿಗೆ ಬಲಭದ್ರನ ಜೊತೆ ಕುಳಿತಿದ್ದ ಸೀತೆ 'ಬರಸಿಡಿಲ ಬಳಿವಿಡಿದು ಪೊಳೆವ ಕುಡು ಮಿಂಚಿನಂತೆ' ಕಾಣಿಸುತ್ತಾಳೆ. ಆ ಕ್ಷಣದಲ್ಲಿ ಸೀತೆ' ದೃಷ್ಟಿಗೆ ಬಲೆಯಾಗಿ, ಹೃದಯಕ್ಕೆ ವಜ್ರ ಸಂಕೋಲೆಯಾಗಿ' ಕಾಣಿಸಲು ರಾವಣನ ಮನಸ್ಸು ಪದ್ಮ ಪತ್ರದ ಮೇಲಿನ ಜಲಬಿಂದುವಿನಂತೆ 'ಚಂಚಲವಾಯಿತು.' ರಾವಣನ

ಮನಸ್ಸೆಂಬ ಕೊಳದಲ್ಲಿ, ಸೀತೆಯ ಚಂಚಲ ನಯನಗಳೆಂಬ ಮೀನುಗಳು ಚಲಿಸಿ, ಪ್ರಶಾಂತತೆಯನ್ನು ಕದಡಿದವು. ಎಂದೂ ಯಾವ ಹೆಣ್ಣಿಗೂ ಸೋಲದ, ಬಯಸದ, ಪ್ರೀತಿಸದ ರಾವಣನ ಮನಸ್ಸು ಈಗ ಸೀತೆಯ ನೆಪದಿಂದ ಜರ್ಝರಿತವಾಯಿತು. ಇಂತಹ ಅವಕಾಶಕ್ಕೆಂದೇ ಕಾಯುತ್ತಿದ್ದ ಮನ್ಮಥನೂ ರಾವಣನ ಹದಗೊಂಡ ಮನಸ್ಸಿನ ಮೇಲೆ ಪುಷ್ಪಬಾಣವನ್ನು ಬಿಟ್ಟು ಅವನಿಗೆ ತನ್ನನ್ನು ನಿಯಂತ್ರಿಸಿಕೊಳ್ಳುವುದೇ ಅಸಾಧ್ಯವಾಗುತ್ತದೆ. ಮನಸ್ಸು, ಪೌರುಷ, ನಡೆನುಡಿ, ಕೀರ್ತಿ, ಸತ್ಯಶೌಚ ಗುಣಗಳೆಲ್ಲವೂ ಧೂಳಿಪಟವಾಗಿ ಬಿಡುತ್ತವೆ. ವಿಷಯ ಲೋಭದಿಂದ ವಿಹಿತಾಚಾರ, ಗುಣಪ್ರಖ್ಯಾತಿ, ದುಷ್ಟನಿಗ್ರಹಶಕ್ತಿ, ಶಿಷ್ಟಪರಿಪಾಲನಾ ಸಾಮರ್ಥ್ಯಗಳೆಲ್ಲವೂ ಪರವಧು ವಿನಾಮಿಷಕ್ಕೆ ಒಳಗಾಗಿ ಚೆಲ್ಲಿಹೋಯಿತು. ಲಂಕೇಶ್ವರ ನಂತಹವನು ಈ ಬಗೆಯ ದೌರ್ಬಲ್ಯಕ್ಕೆ ಒಳಗಾದದ್ದು ವಿಚಿತ್ರವೇ ಆದರೂ, ವಿಧಿ ಒಮ್ಮೊಮ್ಮೆ ಚಾರಿತ್ರ್ಯ ನಾಶಕ್ಕೆ ದಾರಿ ಮಾಡುತ್ತದೆ ಕಾಲವಶದಿಂದ ಸಮುದ್ರವೂ ಒಮ್ಮೊಮ್ಮೆ ತನ್ನ ದಂಡೆಗಳನ್ನು ಮೀರಿ ಉಕ್ಕುವಂತೆ, ರಾವಣನೂ ಕಾಲವಶದಿಂದ ತನ್ನ ಮರ್ಯಾದೆಯ ಸೀಮೆಗಳನ್ನು ಅತಿಕ್ರಮಿಸಿದ.

ಅವಿವೇಕಿಯಾದ ರಾವಣ ವಿಷಸರ್ಪದ ಹೆಡೆಯ ಮೇಲಿನ ಮಣಿಗಾಸೆಪಟ್ಟು ಕೈ ಚಾಚುವ ಗಾಂಪನಂತೆ ರಘುವೀರನ ಮಡದಿಗಾಗಿ ಮನಸ್ಸಿನಲ್ಲಿ ಪ್ರೀತಿ, ಮೋಹಗಳನ್ನು ತಳೆದ. ಪರವಧುವಿಗೆ ಆಸೆಪಟ್ಟ ಪಾಪವೊಂದು ಕಡೆ. ರಾಮನನ್ನು ಎದುರಿಸದೆ ಮೋಸದಿಂದ ಸೀತೆಯನ್ನು ಅಪಹರಿಸಬೇಕೆಂಬ ಆಲೋಚನೆಯ ಪಾಪವು ಮತ್ತೊಂದು ಕಡೆ. ಇವೆರಡೂ ಅವನ ಕೀರ್ತಿಕಾಂತಿಯನ್ನು ಮಂಕಾಗಿಸಿದವು. ತನ್ನ ವಶದಲ್ಲಿದ್ದ ಅವಲೋಕಿನಿ ವಿದ್ಯಾದೇವಿಯನ್ನು ಕರೆದು, ರಾಮನಿಂದ ಸೀತೆಯನ್ನು ಅಪಹರಿಸುವ ಉಪಾಯವನ್ನು ಹೇಳುವಂತೆ ಕೇಳುತ್ತಾನೆ. ಆದರೆ ವಿದ್ಯಾದೇವತೆ ಅವನಿಗೆ ರಾಮಲಕ್ಷ್ಮಣರ ಅಸಮ ಸಾಹಸ ಮತ್ತು ಅವರಿಂದಲೇ ಅವನ ಸಾವಿದೆ ಎಂಬ ಭವಿಷ್ಯದ ಬಗ್ಗೆ ತಿಳಿಸಿ ಹೇಳಿದರೂ ಕೇಳದೆ ದೇವತೆಯ ಮೇಲೇ ಕನಲುತ್ತಾನೆ. ಅವನ ಕರ್ಮ ಅವನಿಗೆ. ಇನ್ನು ಅವನಿಗೆ ಬುದ್ಧಿ ಹೇಳಲು ಸಾಧ್ಯವಿಲ್ಲವೆಂದು ತಿಳಿದು ರಾಮ ಲಕ್ಷ್ಮಣರು ಸೀತೆಯಿಂದ ದೂರವಾಗುವ ಸನ್ನಿವೇಶವನ್ನು ಆ ದೇವತೆ ಸೃಷ್ಟಿಸುತ್ತಾಳೆ.

ಸಮಯಕ್ಕೆಂದೇ ಕಾದಿದ್ದ ರಾವಣ 'ಪರವಧುವಿಗೆ ಆಸೆಪಟ್ಟು ಅಧೋಗತಿಗೆ ಇಳಿವರು' ಎಂಬುದನ್ನು ತೋರಿಸುವಂತೆ ಆಕಾಶದಿಂದ ಕೆಳಗೆ ಇಳಿಯುತ್ತಾನೆ.

ರಾವಣನ ಗ್ರಹಚಾರ ಆರಂಭವಾಗಿದೆ. ಅಪಖ್ಯಾತಿ, ಪಾಪಗಳಿಗೆ ಹೆದರದವರು ಪ್ರಪಂಚದಲ್ಲಿ ಏನನ್ನಾದರೂ ಮಾಡಲು ಸಿದ್ಧ ಎಂಬುದು ಕವಿಯ ಗ್ರಹಿಕೆ. ದೋಷಿಗಳಾದವರು ಕಾದ ಕಬ್ಬಿಣದ ಸಲಾಕೆಯ ದಿವ್ಯವನ್ನು ಹಿಡಿಯುವಂತೆ, ಮಗುವು ಕಾಳಸರ್ಪವನ್ನು ಪರಿಣಾಮವರಿಯದೆ ಹಿಡಿವಂತೆ ರಾವಣ ಸೀತೆಯನ್ನು ಹಿಡಿಯುತ್ತಾನೆ.

'ರಾವಣ ಸೀತೆಯ ಸೌಂದರ್ಯದಾಕರ್ಷಣೆಯಿಂದ ಅವಳನ್ನು ಪಡೆಯಲು, ತನ್ನದಾಗಿಸಿಕೊಳ್ಳಲು ಅವಳ ಬಗ್ಗೆ ತನಗಿದ್ದ ಪ್ರೀತಿ, ಬಯಕೆ, ಕಾಮಗಳನ್ನು ತಣಿಸಿಕೊಳ್ಳಲು ಈ ಧೂರ್ತ ಕಾರ್ಯಕ್ಕೆ ಕೈ ಹಚ್ಚುತ್ತಾನೆ. ಸೀತೆಯ ಬಗ್ಗೆ ಅವನಿಗೆ ಅಪಾರ ಮೋಹವಿದೆ. ಅವಳು ಯಾರೆಂಬುದನ್ನು ಮರೆತು, ಅವಳಿಗೆ ತನ್ನಲ್ಲಿ ಪ್ರೀತಿಯ ಲವ-ಲೇಶವೂ ಇಲ್ಲವೆಂದು ತಿಳಿದೂ ಅವಳನ್ನು ಹಿಡಿದು ತಂದು ತನ್ನ ರಾಜ್ಯದಲ್ಲಿ ಗೃಹಬಂಧನದಲ್ಲಿ, ಇರಿಸುತ್ತಾನೆ. ಕ್ರೂರಾತ್ಮ, ವಂಚಕ, ಅವಿಚಾರಿ ಎಂದು ಸೀತೆಯಿಂದ ಧುತ್ಕಾರಕ್ಕೆ ಒಳಗಾಗುತ್ತಾನೆ. ರಾವಣನಂತಹ ಉಜ್ವಲ ಚಾರಿತ್ರ್ಯವುಳ್ಳವನು ತಾನು ಪ್ರೀತಿಸಿ, ಮೋಹಿಸಿ ತಂದ ಹೆಣ್ಣಿನಿಂದಲೇ ಇಷ್ಟೆಲ್ಲ ಬಗೆಯಲ್ಲಿ ಬೈಸಿಕೊಳ್ಳುವುದು ಅವನ ವ್ಯಕ್ತಿತ್ವಕ್ಕೇ ಆದ ಅವಮಾನ.ಸೀತೆಯ ಆರ್ತತೆಗೆ ಸ್ಪಂದಿಸಿ, ರತ್ನಜಟಿ, (ಜಟಾಯು) ಅವನನ್ನು ಅಡ್ಡಗಟ್ಟಿ 'ಖೇಚರ ಚಕ್ರವರ್ತಿಯೇ ನೀನು ಈ ಪರವಧುಗಳಿವುದಿಹಂಪರಮಳಿಗುಂ ನಿನ್ನ ಮಹಿಮೆಗಿದು ನಡವಳಿಯೇ ?' ಎಂದು ಪ್ರಶ್ನಿಸಿ ಹೇಳಿದ್ದಕ್ಕೆ, ಅದರ ರೆಕ್ಕೆಗಳನ್ನು ಕತ್ತರಿಸಿ ನೆಲಕ್ಕುರುಳಿಸಿದ. ಕಣ್ಣೆದುರಿಗೇ ಇದ್ದ ಸೀತೆಗಾಗಿ ಸ್ಪರ್ಶ ಸುಖಕ್ಕಾಗಿ ಅಂಗಾಂಗಳು ತಹತಹಿಸುತ್ತವೆ. ಮನಸ್ಸು ಸಂಭೋಗ ಸುಖವನ್ನು ಬಯಸುತ್ತದೆ. ಕಣ್ಣುಗಳು ಆಪಾದಮಸ್ತಕ ಸೌಂದರ್ಯ ದರ್ಶನಕ್ಕೆ ಹಾತೊರೆಯುತ್ತವೆ. ಬಾಯಿ ಮನ್ಮಥ ಭಾಷೆಯನ್ನು ಆಡುತ್ತದೆ.ಬಾಹುಗಳು ಆಲಿಂಗನಕ್ಕೆ ಆಸೆಪಡುತ್ತವೆ. ಇದೆಲ್ಲವನ್ನು ಪ್ರಾಪ್ತಿಸಿಕೊಳ್ಳಬೇಕೆಂಬ ಚೇಷ್ಟೆಗೆ ಮುಂದಾಗಲು, ಸೀತೆ ರೌದ್ರಾವತಾರ ತಾಳಿ 'ನೀನೆನ್ನಂ ಸೋಂಕಿದೊಡೆ

ಸಾಲಗೆಗಿಳ್ತು ಸಾವೆನೆಂದು' ನಿಷ್ಠುರವಾಗಿ ನುಡಿಯಲು, ಸೀತೆಯ ಶೀಲಶುದ್ಧಿ, ಪಾತಿವ್ರತ್ಯಗಳ ಆಳವನ್ನರಿತ ರಾವಣ ಮುಂದೆಂದಾದರೂ ಅವಳನ್ನು ಸುಲಭವಾಗಿ ಒಲಿಸಿಕೊಳ್ಳಬಹುದೆಂದು ಭಾವಿಸಿ ಸದ್ಯಕ್ಕೆ ಸುಮ್ಮನಾಗುತ್ತಾನೆ.

ರಾವಣನನ್ನು ಹಿಡಿದ ಪ್ರೀತಿ ಪೆಡಂಭೂತವಾಗಿ ಅವನನ್ನು ಕಾಡತೊಡಗುತ್ತದೆ. ಸೀತೆಯ ಬಯಕೆಯೊಂದಲ್ಲದೆ ಅವನಿಗೆ ಇನ್ನಾವುದೂ ನೋಟ, ಬೇಟ, ಮಾಟಗಳು ಬೇಡವಾಗುತ್ತವೆ. ಮದನಬಾಣಾಘಾತದಿಂದ ತತ್ತರಿಸಿ ಮ್ಲಾನವದನನಾದವನನ್ನು ಮಡದಿ ಮಂಡೋದರಿ ಚಿಂತೆಗೆ ಕಾರಣವೇನೆಂದು ಬೆಸಗೊಳ್ಳಲು, ಅವನಿಂದ ಸರಿಯಾದ ಉತ್ತರ ದೊರೆಯದಿದ್ದರೂ ತಿಳಿಯಲೇಬೇಕೆಂಬ ಆಗ್ರಹದಿಂದ ಮತ್ತೆ ಮತ್ತೆ ಕೇಳಿ ಕಡೆಗೆ ಕಾರಣವರಿಯುತ್ತಾಳೆ. ಎಲ್ಲವನ್ನೂ ತಿಳಿದ ಮೇಲೆ, ರಾವಣನ ಆ ದೈನ್ಯಸ್ಥಿತಿಗೆ ಭಯಗೊಂಡು, ಅವನ ಮೇಲೆ ಮುಳಿಯದೆ. ಅವನು ಸೀತೆಯ ಸೌಂದರ್ಯಕ್ಕೆ ಮರುಳಾದದ್ದು ಸಹಜವೇ ಎಂದು ಸಮಾಧಾನ ಪಡಿಸಿ, ಅವನ ಪ್ರೀತಿ ಬಯಕೆಗಳನ್ನು ಪೂರೈಸಲು ತಾನೆ ಮುಂದಾಗುತ್ತಾಳೆ. ಸೀತೆಯನ್ನು ಕಂಡು ರಾವಣನ ಬಗ್ಗೆ ಸಿರಿಸಂಪತ್ತು ಶೌರ್ಯ, ಸಾಹಸ ಔದಾರ್ಯಾದಿಗಳನ್ನು, ಅವಳ ಬಗೆಗಿದ್ದ ಅಪಾರ ಪ್ರೀತಿಯನ್ನು ಕುರಿತು ಮಾತಾಡಿ, ಮನವೊಲಿಸಲು ಪ್ರಯತ್ನಿಸುತ್ತಾಳೆ ಗಂಡನ ಯೌವ್ವನ, ರೂಪ ತನುಕಾಂತಿಗಳನ್ನು ಎಷ್ಟು ಹೊಗಳಿದರೂ ಸಾಲದೆಂಬಂತೆ ಮಾತಾಡುತ್ತಾಳೆ. ಮೇನಕೆಯಂತಹ ಅಪ್ಸರೆಯರೇ ಬಂದರೂ ಲೆಕ್ಕಿಸದ ತನ್ನ ಗಂಡ, ಸೀತೆಯ ರೂಪಕ್ಕೆ ಮೋಹಿತನಾದುದು ಅವಳ ಪ್ರೀತಿಗಾಗಿ ಕಾತರಿಸುತ್ತಿರುವುದೂ ಅವಳ ಪುಣ್ಯವೆಂದು ತಿಳಿಯುವಂತೆ ಹೇಳುತ್ತಾಳೆ. ಆದರೆ ಎಂತಹ ಪ್ರಲೋಭನೆಗಳೂ ಸೀತೆಯನ್ನು ಕದಲಿಸುವುದಿಲ್ಲ. ರಾವಣನ ವಿಚಾರದಲ್ಲಿ ಎಳ್ಳಿನಷ್ಟು ಪ್ರೀತಿಯೂ ಮೊಳೆಯುವುದಿಲ್ಲ. ನಯದಿಂದ ಒಲಿಸುವುದು ಸಾಧ್ಯವಿಲ್ಲವೆಂದರಿತ ರಾವಣ, ಭಯದಿಂದಲಾದರೂ ಒಲಿಸಿಕೊಳ್ಳಬೇಕೆಂದು ಬಯಸಿ ಹೆಣಗಳ ತೋರಣ, ಭೂತನರ್ತನ, ರಕ್ತದ ಮಳೆ, ಸಿಡಿಲ ಬೀಸು, ಸಮುದ್ರದುಬ್ಬರದ ದೃಶ್ಯಗಳನ್ನು ಸೃಷ್ಟಿಸುತ್ತಾನೆ. ಪರವನಿತೆಗೆ ಆಸೆ ಪಡುವುದು ಪುರುಷನ ಧರ್ಮವಾಗದು. ಇದರಿಂದ ಅಪಖ್ಯಾತಿ ಮತ್ತು ಭೂಮಿಗೆ

ದುರ್ಗತಿ ಲಭಿಸುತ್ತದೆ' ಎಂದು ಹೇಳಿದ ವಿಭೀಷಣನನ್ನೂ ಧಿಕ್ಕರಿಸಿ, ವಿರಹ ವಿಕಲನಾಗಿಯೇ ಉಳಿಯುತ್ತಾನೆ.

ಕೊನೆಗೆ ಭವಿಷ್ಯದಲ್ಲಿದ್ದಂತೆ, ಸೀತೆಯ ಕಾರಣದಿಂದ ಭಯಂಕರ ಸಮರ, ಸಾವುಗಳಿಗೆ ಆಹ್ವಾನ ನೀಡುತ್ತಾನೆ. ಸ್ತ್ರೀ ವ್ಯಾಮೋಹದ ಪರಕಾಷ್ಠೆಯಲ್ಲಿ ಉಳಿದಿದ್ದ ರಾವಣನಿಗೆ ಯಾರ ಮಾತುಗಳೂ ರುಚಿಸದೆ, ಲಕ್ಷ್ಮಣನನ ಕೈಯಿಂದ ಹತನಾಗುತ್ತಾನೆ. 'ಅನ್ಯ ಸತೀ ಸಂಭೋಗ ಕೆಳಿಸಿದವರು ಈ ಬಗೆಯಲ್ಲಿ ಸಾವಿನ ದುರಂತಕ್ಕೆ ಒಳಗಾಗುವುದು ಆಶ್ಚರ್ಯವೇನಲ್ಲ.' ವೆಂಬುದು ಕವಿಯ ನಂಬಿಕೆ.

ಈ ರಾವಣ ಸೀತಾ ಪ್ರಸಂಗದಲ್ಲಿ ರಾವಣನಿಂದ ಸೀತೆಯ ಮೇಲೆ ಬಲಾತ್ಕಾರ, ಅತ್ಯಾಚಾರಗಳು ನಡೆಯುವುದಿಲ್ಲ. ಪ್ರೀತಿಯ ಹಟದಿಂದ ತಾನು ನಾಶವಾಗುವುದೇ ಅಲ್ಲದೆ ತನ್ನೊಂದಿಗೆ ಅನ್ಯರ ಪ್ರಾಣ ಹಾನಿಗೂ ರಾಜ್ಯದ ಅವನತಿಗೂ ಕಾರಣನಾಗುತ್ತಾನೆ. ಪ್ರೀತಿಯ ಮೂಲದಲ್ಲಿ ವಿನಾಶವೂ ಸುಪ್ತವಾಗಿದೆ. ಅದೂ ಒಮ್ಮುಖದ ಪ್ರೀತಿಯಂತೂ ಇಂತಹ ಅನಾಹುತಗಳಿಗೆ ಆಹ್ವಾನವೀಯುವುದೆಂಬುದು ಸತ್ಯಾಸತ್ಯವಾದ ಮಾತಾಗಿದೆ.

★ ★ ★

ನೆಲೆ - ೫

# ಎನಗೆ ವಿದ್ಯೋಪದೇಶಂಗೈದುದರಿಂ ಗುರುವಾದೆ.

ಹಿಂದಿನ ಪ್ರಸಂಗದಲ್ಲಿ ರಾವಣನ ಉದ್ಭಟ ಪ್ರೀತಿಯ ಒಂದು ಮುಖ ಕಾಣಿಸಿದರೆ, ಅವನಿಗೆ ಇನ್ನೂ ಒಂದು ಮುಖ, ತನಗಾಗಿ ಅರಸಿಬಂದ, ತನ್ನನ್ನೇ ಬದುಕಿನ ಗುರಿಯೆಂದು ಭಾವಿಸಿದ, ಬಯಸಿದರೂ ಲಭ್ಯವಾಗದ ಲಭ್ಯವಾದಾಗ ಬಿಡಬಾರದೆಂದು ಸತೀಧರ್ಮದ ನೈತಿಕ ಚೌಕಟ್ಟನ್ನು ಮೀರಿ ಬಂದ ಹೆಣ್ಣೊಬ್ಬಳನ್ನು 'ಪರನಾರಿವಿರತಿ' ವ್ರತದಿಂದಾಗಿ ಗೌರವದಿಂದ ಮರಳಿಸಿದ ಮುಖವಿರುವುದು ಕಾಣಿಸುತ್ತದೆ.

ರಾವಣ ಅಸಮ ಸಾಹಸಿ. ದಿಗ್ವಿಜಯೋದ್ಯುಕ್ತನಾಗಿ ಹೊರಟು ತನ್ನ ಜೈತ್ರ ಯಾತ್ರೆಯಲ್ಲಿ ತನ್ನನ್ನು ಎದುರಿಸಲಾರದೆ ಸೋತ ಶತ್ರುಗಳನ್ನು ಕೊಲ್ಲದೆ, ಹಿಂಸಿಸದೆ ದಯೆ. ಔದಾರ್ಯಗಳಿಂದ ಕ್ಷಮಿಸುತ್ತಾನೆ. ಸಮರವನ್ನು ಕ್ರೂರ ಕರ್ಮವೆಂದು ಭಾವಿಸಿದವನು. ಅಹಿಂಸಾ ಅಣು ವ್ರತ ಹಿಡಿದವನು ಮಾಹಿಷ್ಮತೀ ಪುರದ ಸಹಸ್ರಬಾಹುವನ್ನು, ವರುಣನನ್ನು ಇಂದ್ರನನ್ನು ಸೋಲಿಸಿದರೂ ಅವರ ಆರ್ತ ಪ್ರಾರ್ಥನೆಗೆ ಕಿವಿಗೊಟ್ಟು ಅವರನ್ನು ಅವರವರ ಪೂರ್ಣಪದವಿಗಳಲ್ಲೇ ಇರಿಸಿ, ಮುಂದುವರೆದು ಅಷ್ಟಾಪದ ಶೈಲದ ಕಟಕ ಪ್ರದೇಶದಲ್ಲಿ ಬೀಡುಬಿಡುತ್ತಾನೆ. ಅದು ಸಮೀಪದಲ್ಲಿ ಇಂದ್ರನ ಲೋಕಪಾಲಕನಾದ ನಳಕೂಬರನು ಒಡೆಯನಾಗಿದ್ದ. ದುರ್ಲಂಘ್ಯ ಪುರವೆಂಬುದೊಂದಿತ್ತು. ರಾವಣನ ದಿಗ್ವಿಜಯಗಳು, ಅವನ ಆಗಮನದ ಬಗ್ಗೆ ಕೇಳಿದ ನಳಕೂಬರ, ಮುನ್ನೆಚ್ಚರಿಕೆ ವಹಿಸಿ, ಉರಿಕಾರುವ ಯಂತ್ರಗಳನ್ನು ನಿರ್ಮಿಸಿ ತನ್ನ ಕೋಟೆ ಕೊತ್ತಲಗಳನ್ನೆಲ್ಲ ಭದ್ರಪಡಿಸುತ್ತಾನೆ. ಎಷ್ಟೆಲ್ಲ ದಿಗ್ವಿಜಯಗಳನ್ನು ಸಾಧಿಸಿಕೊಂಡು ಬಂದ ರಾವಣನಿಗೆ ಈ ದುರ್ಲಂಘ್ಯಪುರ ನಿಜವಾಗಿಯೂ ದುರ್ಲಂಘ್ಯವಾಗಿ ಪರಿಣಮಿಸುತ್ತದೆ. ಅದನ್ನು ಆಕ್ರಮಿಸುವ ಉಪಾಯದ ಯೋಚನೆಯಲ್ಲಿರುವಾಗಲೇ ನಳಕೂಬರನ ಹೆಂಡತಿ ಉಪರಂಭೆ ತನ್ನ ಸಖಿಯಾದ ಚಿತ್ರಮಾಲೆಯನ್ನು ರಾವಣನಲ್ಲಿಗೆ ಅಭಿಸಾರಕ್ಕಾಗಿ ಕಳಿಸುತ್ತಾಳೆ.

ಚಿತ್ರಮಾಲೆ ಸಖಿ, ಒಡತಿಯಾದ ಉಪರಂಭೆಯ ಪರಿಚಯವೆಲ್ಲ ತಿಳಿಸಿ, ರಾವಣನಿಗಾಗಿ ಆಕೆ ಪರಿತಪಿಸುತ್ತಿರುವುದನ್ನೂ, ಆಕೆಯ ರೂಪ ಲಾವಣ್ಯಗಳನ್ನು ಬಣ್ಣಿಸಿ, ರೂಪ, ವಿದ್ಯೆಗಳಲ್ಲಿ ಅನುಪಮೇಯಳಾಗಿರುವ ಆಕೆ ರಾವಣನನ್ನು ಕೂಡಿದರೆ ಆತನಿಗೆ ಯಾವುದೂ ಅಸಾಧ್ಯವಾಗುವುದಿಲ್ಲ. ಉಪರಂಭೆಯ ಈ ದುರ್ನಡತೆಗೆ ಆಶ್ಚರ್ಯಪಟ್ಟು, ಏನು ಮಾಡುವುದೆಂದು ಯೋಚಿಸಲು ವಿಭೀಷಣನನ್ನು ಕರೆಸಿ ಸಲಹೆ ಕೇಳುತ್ತಾನೆ. ರಾಜನೀತಿ ವಿಶಾರದನಾದ ವಿಭೀಷಣ ಆಕೆಯನ್ನು ಒಲಿದಂತೆ ನಂಬಿಸಿ ಅವಳಿಂದ ದುರ್ಲಂಘ್ಯಪುರದ ಕೋಟೆಗಳನ್ನು ಭೇದಿಸಲು, ನಾಶಪಡಿಸಲು ಇರಬಹುದಾದ ಪ್ರತಿ ವಿದ್ಯೆಯನ್ನು ಆಕೆಯಿಂದ ಕಲಿತುಕೊಳ್ಳುವುದೆಂಬ ಸಲಹೆಯನ್ನು ನೀಡುತ್ತಾನೆ. ರಾವಣನು ವಿಭೀಷಣನ ಸಲಹೆಯಂತೆಯೇ ಚಿತ್ರಮಾಲೆಯ ಮುಂದೆ ಒಪ್ಪಿಗೆ ಸೂಚಿಸಿ, ತಮ್ಮಿಬ್ಬರ ಕೂಟ ದುರ್ಲಂಘ್ಯಪುರದಲ್ಲಿಯೇ ನಡೆಯುವಂತಾಗಲೆಂದು ಹೇಳುತ್ತಾನೆ.

ಹಿಂತಿರುಗಿ ಬಂದ ಸಖಿಯಿಂದ ವಿಷಯ ತಿಳಿದ ಉಪರಂಭೆ ತನ್ನ ಕಾರ್ಯದಿಂದ ಕೈ ಹಿಡಿದ ಗಂಡನಿಗೆ ಅನ್ಯಾಯವಾಗುವುದೆಂಬುದನ್ನೂ ಮರೆತು ಮದೋನ್ಮಾದದಿಂದ ಪತಿ ದ್ರೋಹಕ್ಕೆ ಮುಂದಾಗುತ್ತಾಳೆ. ಉಪರಂಭೆಯಿಂದ ಪ್ರತಿವಿದ್ಯೆ ಮಂತ್ರವನ್ನು ಕಲಿತು, ದುರ್ಲಂಘ್ಯಪುರವನ್ನು ಆಕ್ರಮಿಸಿ ಜಯಗಳಿಸುತ್ತಾನೆ. ಆಕೆಯನ್ನು ಕರೆದು ವಿದುಧ್ವಜಕುಲದ ಕುಶಧ್ವಜ ಮಧುಕಾಂತೆಯರಿಗೆ ಮಗಳಾದವಳು, ನಿಜಕುಲಾಚಾರವನ್ನು ತಿಳಿದು ಶೀಲಪರಿಪಾಲನೆ ಮಾಡಬೇಕಾದ್ದು ಧರ್ಮ. ಅಲ್ಲದೆ ನೀನು ನನಗೆ ಮಂತ್ರೋಪದೇಶ ಮಾಡಿದ ಕಾರಣದಿಂದ ನನಗೆ ಗುರುವಾದೆ ಎಂದು ಬುದ್ಧಿ ಹೇಳಿ ಕಳಿಸುತ್ತಾನೆ. ನಳಕೂಬರನು ಸೋತರೂ ಅವನನ್ನು ಮನ್ನಿಸುತ್ತಾನೆ.

ಹೀಗೆ ಒಬ್ಬನೇ ಕವಿ ಒಂದೇ ಕಾವ್ಯದಲ್ಲಿ ಒಬ್ಬನ ವ್ಯಕ್ತಿತ್ವದಲ್ಲಿನ ಪ್ರೀತಿಯ ಎರಡು ಮುಖಗಳನ್ನು ದರ್ಶಿಸಿದ್ದಾನೆ. ಸೀತೆಗಾಗಿ ಆಸೆ ಪಟ್ಟದ್ದೂ ಕವಿಯ ದೃಷ್ಟಿಯಲ್ಲಿ ವಿಧಿಯಾಟದಿಂದ. ಪ್ರೀತಿ, ಪ್ರೇಮಗಳು ಪ್ರೀತಿಸಿದ ವಸ್ತು, ವ್ಯಕ್ತಿಗಳನ್ನು ಸ್ವಂತ ಮಾಡಿಕೊಳ್ಳಲು ಒಡೆತನಕ್ಕೆ ಒಳಗಾಗಿಸಲು ಬಯಸಬಾರದು. ಭಾವಾವೇಶ, ಉದ್ವಿಗ್ನತೆಯೊಳಗೆ ಹುಟ್ಟುವ ಪ್ರೀತಿ,

ಪ್ರೀತಿಯಲ್ಲ, ಪ್ರೀತಿಯನ್ನು ಅರಿಯುವುದೂ ಸಾಧ್ಯವಿಲ್ಲ. ಗೌರವ, ಕ್ಷಮೆ ಕನಿಕರಗಳು ಇದ್ದಲ್ಲಿ ಪ್ರೀತಿ, ಪ್ರೇಮಗಳು ಸಾಧ್ಯ. ಭಾವೋದ್ವೇಗದಿಂದ ಬಂದ ಪ್ರೀತಿಗೆ ಪ್ರತಿಕ್ರಿಯೆ ಇಲ್ಲದೆ ಹೋದಾಗ ಕೌರ್ಯ ಹಿಂಸೆಗಳು ನುಸುಳುತ್ತವೆ.

★ ★ ★

ನೆಲೆ - ೬

# ಮುಟ್ಟಿದ ಮನಮನೆ ತೊಟ್ಟನೆ ಪಸಾಯದಾನಂಗೊಟ್ಟಳ್.

ಪ್ರೀತಿಯನ್ನು ಕುರಿತು ಅನೇಕರು ಅನೇಕ ರೀತಿಯಲ್ಲಿ ವ್ಯಾಖ್ಯಾನಿಸುತ್ತಾರೆ. ಪ್ರೀತಿಗೆ ಲಾಭ ನಷ್ಟಗಳ ಪರಿವೆ ಇಲ್ಲ. ಅದು ಶುದ್ಧವಾದ ಅನುಭವ ಎಂದು ಹೇಳುವುದರ ಜೊತೆಗೆ ಪ್ರೀತಿಗೆ ಕಣ್ಣಿಲ್ಲವೆಂದೂ ಹೇಳುತ್ತಾರೆ. ಪ್ರೀತಿ ಅನನ್ಯವಾದಾಗ, ಅದಮ್ಯವಾದಾಗ ಅದೂ ಹೆಣ್ಣು-ಗಂಡು ಸಂಬಂಧದಲ್ಲಿ, ಹೊರಗಿನ ರೂಪ, ಬಣ್ಣ, ಆಕಾರ, ವಿಕಾರ ಯಾವುದೂ ಪರಿಗಣನೆಗೆ ಬರುವುದಿಲ್ಲ. ಬೇರೆಯವರ ನೋಟಕ್ಕೆ ಅಸುಂದರವಾಗಿಯೂ, ಅಷ್ಟಾವಕ್ರವಾಗಿಯೂ, ವಿಕಾರವಾಗಿಯೂ ಎನಿಸಬಹುದು. ಸ್ಥಿತಿವಂತಿಕೆಯಿಲ್ಲದೆ, ದೀನದಲಿತನೂ ಆಗಿರಬಹುದು.ವಂಶ, ಕುಲ, ಪ್ರತಿಷ್ಠೆಗಳೂ ಇಲ್ಲದಿರಬಹುದು. ಆದರೆ ಪ್ರೀತಿಸುವ ಮನಸ್ಸುಗಳಿಗೆ ಇದ್ಯಾವುದೂ ಬರುವುದೇ ಇಲ್ಲ. ಪ್ರೀತಿಯೊಂದೇ ಮುಖ್ಯವಾಗಿ, ಅದನ್ನು ಪಡೆದುಕೊಳ್ಳಲು ಎಲ್ಲ ಬಗೆಯ ಸಂಸ್ಕಾರ, ನೈತಿಕತೆಗಳನ್ನು ಉಚ್ಚಾಟನೆ ಮಾಡಿಬಿಡುವ, ತಮ್ಮ ಶ್ರೇಯಸ್ಸನ್ನೇ ಬಯಸುವ ಹಿರಿಯರನ್ನು ತಂದೆ-ತಾಯಿಗಳನ್ನು ಸಮಾಜವನ್ನು ಎದುರಿಸಿ, ಪ್ರತಿಭಟಿಸಿ ತಮ್ಮ ಪ್ರಾಣಕ್ಕೆ ತಮ್ಮವರಿಗೆ ಸಂಚಕಾರ ಬಯಸುವ ಸಾಧ್ಯತೆಗಳೇ ಹೆಚ್ಚಿದ್ದರೂ ಪ್ರೀತಿಯನ್ನು ಬಿಡುವುದಿಲ್ಲ. ಒಮ್ಮೆ ಮೊಳೆತು ಬೆಳೆದ ಪ್ರೀತಿಯನ್ನು ಕಡಿದು ಉರುಳಿಸಲು ಸಾಧ್ಯಾವಿಲ್ಲ.ಪ್ರೀತಿಗೆ ನಿರ್ದಿಷ್ಟ ವಯಸ್ಸು, ಕಾಲಗಳ ಮಿತಿಯಿಲ್ಲ, ನಿರ್ಬಂಧವಿಲ್ಲ. ವಿವಾಹ ಪೂರ್ವದ ಪ್ರೀತಿ ಎಷ್ಟು ಪ್ರಬಲವೋ ವಿವಾಹಾನಂತರದ ವಿವಾಹಬಾಹಿರ ಪ್ರೀತಿಯೂ ಅಷ್ಟೇ ಪ್ರಬಲವಾಗಿ ಇರಬಲ್ಲದು. ವಿವಾಹ ಬಾಹಿರ ಸಂಬಂಧಗಳೂ ವಿಚಿತ್ರವಾದದ್ದು. ಪರಪುರುಷನಲ್ಲಿ ಕೈ ಹಿಡಿದ ಗಂಡನಲ್ಲಿ ಇಲ್ಲದ ಯಾವುದೇ ಪಾಸಿಟೀವ್ ಗುಣಗಳಿಲ್ಲದಿದ್ದರೂ ವಿಚಿತ್ರ ಮನಸ್ಥಿತಿಯಲ್ಲಿ ಒಲಿದು, ಪ್ರೀತಿಸುವವನಲ್ಲಿರುವ ವಿಕಲತೆ, ದೌರ್ಬಲ್ಯಗಳನ್ನೂ ಗುಣಾತ್ಮಕವೆಂದು

ಸಮರ್ಥಿಸಿಕೊಳ್ಳುವ ವಿಕೃತ ಪ್ರೇಮಿಗಳೂ ಅಪರೂಪವೇನಲ್ಲ. ತಮ್ಮ ಪ್ರೀತಿಯನ್ನು ಸಫಲವಾಗಿಸಗೊಳಿಸಲು ಸಾರ್ಥಕಗೊಳಿಸಲು,ತಮಗೆ ಬೇಕೆನಿಸಿದವರನ್ನು ಪಡೆದು ಕೊಳ್ಳಲು, ತಮ್ಮ ಸ್ವಾರ್ಥವೊಂದನ್ನೇ ಮುಖ್ಯವಾಗಿಸಿಕೊಂಡು, ತಮ್ಮ ಆತ್ಮೀಯರನ್ನೂ, ತಮ್ಮ ಕ್ಷೇಮಾಕಾಂಕ್ಷಿಗಳನ್ನೂ, ತಮ್ಮನ್ನು ಆರಾಧಿಸುವವರನ್ನು ನಿರ್ದಾಕ್ಷಿಣ್ಯವಾಗಿ, ಕ್ರೂರವಾಗಿ ಹಿಂಸೆಗೆ, ಸಾವಿಗೆ ಗುರಿಯಾಗಿಸುತ್ತಾರೆ. ಹೀಗೆ ಮಾಡುವಲ್ಲಿ ಸಾಮಾಜಿಕ, ನೈತಿಕ ಮೌಲ್ಯಗಳ ಬಗ್ಗೆ ಕಾಳಜಿಯಾಗಲೀ, ಭಯವಾಗಲೀ ಅವರನ್ನು ಕಾಡುವುದಿಲ್ಲ. ತನಗೆ ಗಂಡನಿದ್ದೂ ಪರಪುರುಷನಿಗೆ ಒಲಿಯುವ ಒಂದು ಹೆಣ್ಣಿಗೆ ತನ್ನ ಗಂಡನಲ್ಲಿ ಇಲ್ಲದ ಮತ್ಯಾವುದೋ ಗುಣ. (ರೂಪ, ಹಣ, ಅಂತಸ್ತು ಇತ್ಯಾದಿ) ಕಾಣಿಸಿದಲ್ಲಿ ತನ್ನ ಪ್ರೀತಿ, ಸೆಳೆತ ಸಮರ್ಥನೀಯವಾಗಬಹುದು. ಆದರೆ ಅದ್ಯಾವುದೂ ಇಲ್ಲದೆ, ನೋಡುವುದಕ್ಕೂ ಹೇಸಿಗೆ ಎನಿಸುವಷ್ಟು ವಿಕಾರನಾಗಿರುವ ಒಬ್ಬ ಪುರುಷನನ್ನು, ಅವನ ಮಧುರ ಕಂಠಸಿರಿಗೆ ಒಲಿಯುವುದು, ವಿಕಾರ ರೂಪದ ಅರಿವಿದ್ದೂ ಅವನಿಗೆ ತನ್ನನ್ನು ಒಪ್ಪಿಸಿಕೊಂಡು ಅವನು ಕೊಡುವ ದೈಹಿಕ ಹಿಂಸೆಯನ್ನೂ ಸಹಿಸಿಕೊಳ್ಳುವ ಹೆಣ್ಣಿನ ಪ್ರೀತಿ, ಕಾಮಗಳು ಸಹಜ, ಸ್ವಾಭಾವಿಕ ಎಂದೆನಿಸುವುದಿಲ್ಲ. ಅದನ್ನು ವಿಕೃತ ಕಾಮವೆಂದು, ಪ್ರೀತಿಯ ವಿಕೃತ ಸ್ಥಿತಿಯೆಂದೂ ಗುರುತಿಸಬಹುದು. ಈ ವಿಕೃತಕಾಮ ಕೈ ಹಿಡಿದ ಗಂಡನನ್ನೂ ಕೊಲ್ಲುವಂತೆ ಪ್ರಚೋದಿಸುತ್ತದೆ.

ಜನ್ನನ 'ಯಶೋಧರ ಚರಿತೆ' ಯ ಅಮೃತಮತಿ ಇಂತಹ ವಿಚಿತ್ರ ಮನಃ ಸ್ಥಿತಿಯುಳ್ಳವಳು. ಜೈನ ಕವಿಯಾಗಿ, ಜೈನಧರ್ಮ ಸಿದ್ಧಾಂತಗಳ ಪ್ರತಿಪಾದನೆಗೆಂದೇ ಈ ಕಾವ್ಯ ಬರೆದರೂ ಮನುಷ್ಯನ ಮೂಲಭೂತ ಪ್ರವೃತ್ತಿಗಳ ನಿರೂಪಣೆಯಲ್ಲಿ ಯಾವುದೇ ವ್ಯತ್ಯಾಸಗಳಿಲ್ಲ. ಕೊಲೆ, ಹಿಂಸೆಗಳು ಜೈನ್ಯಧರ್ಮದ ಪ್ರಕಾರ ಅನೇಕ ಜನ್ಮಾಂತರಗಳ ಸುಳಿಗೆ ಸಿಗುವಂತೆ ಮಾಡುತ್ತವೆ.

ಕೊಲೆ, ಹಿಂಸೆಗಳಿಂದ ಯಶೋಧರ, ಅಮೃತಮತಿ, ಯಶೋಮತಿ- ಇವರುಗಳಿಗೆ ಏನಾಯಿತು ಎನ್ನುವುದಕ್ಕಿಂತ, ಯಶೋಧರನನ್ನು, ಕೈ ಹಿಡಿದ ಗಂಡನನ್ನು ಕೊಲ್ಲಲು ಹೊರಟ

ಅಮೃತಮತಿಯ ಪ್ರೀತಿ ಕಾಮಗಳ ರೀತಿ, ಸ್ವರೂಪವನ್ನು ಅರಿಯುವುದು ನಮಗೆ ಮುಖ್ಯವಾಗುತ್ತದೆ.

ಯಶೋಧರ, ಉಜ್ಜಯಿನಿಯ ಯಶೌಘ ಮತ್ತು ಚಂದ್ರಮತಿ ರಾಜದಂಪತಿಗಳಿಗೆ ಮನ್ಮಥನ ಕಬ್ಬಿನ ಬಿಲ್ಲಿನ ಹೂವಿನ ಹಗ್ಗದಿಂದ ಹುಟ್ಟುವ ಜನಮೋಹನ ಬಾಣದಂತೆ, ಅವರಿಬ್ಬರ ಉಚಿತ ರತಿಯಿಂದ ಹುಟ್ಟಿದನಾಗಿ ಅತ್ಯಂತ ಸುಂದರನಾಗಿದ್ದನು. ನೋಡುವ ಕಣ್ಗಳ ಸಿರಿಯಾಗಿ, ಮಾತಾಡುವ ಬಾಯ್ಗಳ ರಸಾಯನವಾಗಿ ಇದ್ದಂತಹ ಅವನ ರೂಪು ಅಸಾಮಾನ್ಯವಾದುದಾಗಿತ್ತು. ಇಷ್ಟೇ ಅಲ್ಲ ಚಂದ್ರನಂತೆ ಆಹ್ಲಾದಕರನಾಗಿದ್ದ. ಮನ್ಮಥನಂತೆ ಸುಂದರನಾಗಿದ್ದ, ಮಲಯಾನಿಲನಂತೆ ಸುಖ ಸ್ಪರ್ಷವುಳ್ಳವನಾಗಿದ್ದ. ರೂಪ, ಸೌಂದರ್ಯಗಳ ಜೊತೆಗೆ ಅತುಲ ಪರಾಕ್ರಮವೂ ಸೇರಿ, ಜಗತ್ತಿನಲ್ಲಿ ಅವನಿಗೆ ಸರಿಸಾಟಿ ಎನಿಸುವವರು ಇರುವುದೇ ಅಸಾಧ್ಯವಾಯಿತು.

ಇಂತಹ ಯಶೋಧರನಿಗೆ ಅಮೃತಮತಿಯೆಂಬುವಳು ಹೆಂಡತಿಯಾಗಿ ಬಂದಳು. ಅಮೃತಮತಿಯ ಸೌಂದರ್ಯವೂ ಅಸಾಧಾರಣವಾಗಿತ್ತು. ಕವಿಯ ಮಾತಿನಲ್ಲಿ ಹೇಳುವುದಾದರೆ, ರಾಜನನ್ನು ಹಿಡಿದು ಆಕರ್ಷಿಸಲು ಮನ್ಮಥನೆಂಬ ಬೇಟೆಗಾರನು ಒಡ್ಡಿದ 'ದೀವ' ದಂತೆ ಇದ್ದಳಂತೆ. ಅಮೃತಮತಿಯನ್ನು ಯಶೋಧರ ತನ್ನ ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದ. ಅಮೃತಮತಿಯೂ ರಾಜನನ್ನು ಅದೇ ಪ್ರಮಾಣದಲ್ಲಿ ಪ್ರೀತಿಸುತ್ತಿದ್ದಳು. ಯಶೋಧರ ಅಮೃತಮತಿಯರ ಪ್ರೀತಿ, ಪ್ರಣಯಿಗಳಿಗೆ ಅಸೂಯೆಯನ್ನುಂಟು ಮಾಡುವಂತೆ ಇತ್ತು. ಹೆಂಡತಿಯ ಅನನ್ಯ ಪ್ರೀತಿ, ತಲೆಯ ಮೇಲೆ ರಾಜತ್ವದ ಕಿರೀಟ, ಪ್ರಜೆಗಳ ಅನುರಾಗ, ದಿಗ್ದಿಗಂತದವರೆಗೆ ವಿಸ್ತರಿಸಿದ ಕೀರ್ತಿ-ಎಲ್ಲವೂ ಅವನ ಪಾಲಿನ ಸೌಭಾಗ್ಯವಾಗಿತ್ತು. ಕಸ್ತೂರಿ ಲೇಪನದಷ್ಟು ಸುಲಭವಾಗಿ ಭೂಮಂಡಲ ರಕ್ಷಣ ಭಾರವನ್ನು ಹೆಗಲ ಮೇಲೆ ಹೊತ್ತು ಅಮೃತಮತಿಯೊಡನೆ ಸಮಸ್ತ ಸುಖಗಳನ್ನು ಯಥೇಷ್ಟವಾಗಿ ಅನುಭವಿಸುತ್ತಿದ್ದ. ತನ್ನ ಯೌವನದ ಅಲಂಕಾರಗಳನ್ನು ಮಡದಿ ಅಮೃತಮತಿಯ ಮುಖಮುಕುರದಲ್ಲಿ ತಿದ್ದಿಕೊಳ್ಳುತ್ತಿದ್ದ.

ತನ್ನ ರಾಣಿಯೊಡನೆ ಒಂದು ದಿನ ಯಶೋಧರ, ಇಂದ್ರನ ಐರಾವತವು ತನ್ನ ಹೆಣ್ಣಾನೆಯೊಡನೆ ಬರುವಂತೆ, ಅಮೃತಮತಿಯೊಡಗೂಡಿ ಶಯ್ಯಾಗೃಹವನ್ನು ಪ್ರವೇಶಿಸಿ ಆಲಿಂಗನ, ಚುಂಬನಾದಿ ಸುರತ ಕ್ರೀಡಾ ನಿರತನಾಗಿ, ಸುರತಸುಖೋದ್ರೇಕದಿಂದ ದಣಿದವರಾಗಿ ಕೂಡಲೇ ನಿದ್ರಾವಶರಾಗುತ್ತಾರೆ. ಸುಖ ನಿದ್ರೆಯಲ್ಲಿ ಮೈಮರೆತು ಒರಗಿರಲು, ರಾತ್ರಿಯ ಮೂರನೇ ಜಾವದಲ್ಲಿ ಅಂತಃಪುರದ ಸಮೀಪವಿದ್ದ ಆನೆಯ ಲಾಯದಲ್ಲಿ ಮಾವಟಿಗನೊಬ್ಬನು ತನ್ನ ಸಂತೋಷಕ್ಕಾಗಿ ಹಾಡೊಂದನ್ನು ಗುನುಗುನಿಸಲು, ಆ ಧ್ವನಿಯನ್ನು ಕೇಳಿ ಎಚ್ಚರಗೊಂಡ ಅಮೃತಮತಿ ಆ ಕಂಠ ಮಾಧುರ್ಯಕ್ಕೆ ಮರುಳಾಗಿ ತೊಟ್ಟನೆ ತನ್ನ ಮನಸ್ಸನ್ನು, ಹಾಡಿದವನಿಗೆ ಒಪ್ಪಿಸಿಬಿಟ್ಟಳು. ಆ ಮಧುರವಾದ ಇನ್ನೂ ಹಲವಾರು ಮಧುರ ರಾಗ, ತಾಳಬದ್ಧ ಹಾಡುಗಳನ್ನು ಹಾಡಿದನು. ಇಷ್ಟು ಇಂಪಾಗಿ ಹಾಡಿದವನ ಬಗ್ಗೆ ಕೂಡಲೇ ಪ್ರೀತಿಯನ್ನು ಬೆಳೆಸಿಕೊಂಡದ್ದಷ್ಟೆ ಅಲ್ಲ, ಅವನನ್ನು ಕಂಡು ಮಾತಾನಾಡಿಸಬೇಕೆಂಬ ತಹತಹಿಕೆಯೂ ಹೆಚ್ಚಾಯಿತು. ಬೆಳಗಾಗುವವರೆಗೆ ಕಾಲ ಕಳೆಯುವುದೇ ಅವಳಿಗೆ-ಕಷ್ಟವಾಯಿತು. ಬೆಳಗಾಗುವುದನ್ನೇ ಜಾತಕ ಪಕ್ಷಿಯಂತೆ ಕಾದಳು.

ಬೆಳಗಾಗುತ್ತಿದ್ದಂತೆ, ತಡಮಾಡದೆ ತನ್ನ ಆಪ್ತ ಸಖಿ ಗುಣವತಿ ಎಂಬುವಳನ್ನು ಕರೆದು ನೆನ್ನಿನ ಸಂಗತಿಯನ್ನೆಲ್ಲ ತಿಳಿಸಿ, ರಾತ್ರಿ ಹಾಡಿದ ಸಂಗೀತಗಾರ ಯಾರೆಂಬುದನ್ನು ತಿಳಿದು ಬರಲು ಹೇಳಿದಳು. ಗೆಳತಿಯ ಆದೇಶದಂತೆ ಬಂದ ಗುಣವತಿ ಸಂಗೀತಗಾರನನ್ನು ಪತ್ತೆ ಹಚ್ಚಿ, ನೋಡಿದ್ದೇ ಗಾಭರಿಗೊಳ್ಳುತ್ತಾಳೆ. ಮಾವುತನಾದ ಅವನ ರೂಪ ನೋಡಲು ಕಣ್ಣಿಗೆ ಅತಿ ವಿಕಾರವಾಗಿಯೂ ಅಸಹ್ಯವಾಗಿಯೂ ಇದ್ದುದನ್ನು ತಿಳಿಸುವುದಕ್ಕೂ ಅವಳಿಗೆ ಸಂಕೋಚವೆನಿಸುತ್ತಿತ್ತು. ಆದರೆ ರಾಣಿ ಅಮೃತಮತಿಯ ಸ್ಥಿತಿ, ಕಾತರ,ಕುತೂಹಲ, ಚಡಪಡಿಕೆಗಳ ಸಂಗರದಂತಿತ್ತು.

ತನ್ನ ಗೆಳತಿ ಎಂದು ಬಂದಾಳು ? ಅವನು ಹೇಗಿದ್ದಾನು ಅವನನ್ನು ಎಂದು ಸಂಧಿಸಿಯೇನು ? ಎಂದೆಲ್ಲಾ ಯೋಚಿಸುತ್ತಿದ್ದಳು. ಗುಣವತಿಗೆ, ಗೆಳತಿಯ ಕಾತುರ ಆತುರಗಳು ಅರ್ಥವಾಗುವುದಿಲ್ಲ. ಒಂದು ವೇಳೆ ಇವನನ್ನು ಅವಳು ಪ್ರೀತಿಸುವಂತಾದರೆ, ತ್ರಿಭುವನ ಸುಂದರಿಯಾದ

ಅಮೃತಮತಿಗೆ, ಈ ಅಷ್ಟಾವಂಕನಿಗೆ-ಎಲ್ಲಿಗೆಲ್ಲಿಯ ಸಂಬಂಧ ? ಅವನನ್ನು ಅವಳು ಹೇಗೆ ತಾನೇ ಮೋಹಿಸಿದಳು ? "ಚಿತ್ರಮಪಾತ್ರೇರಮತೇ ನಾರಿ!" "ಅಪಾತ್ರನಾದವನಲ್ಲಿ ಪ್ರೀತಿಯನ್ನು ಇರಿಸಲು ಹೊರಟಿರುವುದು ನಿಜವಾಗಿಯೂ ವಿಚಿತ್ರ ?" ಹೀಗೆ ಅಪಾತ್ರರಾದವರಲ್ಲಿ ಪ್ರೀತಿಯುಂಟಾಯಿತೆಂದರೆ ಬಹುಶಃ ಅದು ವಿಧಿಯ ಕೈವಾಡವೇ ಇರಬೇಕು.- ಎಂದು ಏನೆಲ್ಲ ತರ್ಕ, ಸಮರ್ಥನೆಗಳನ್ನು ಆಲೋಚಿಸುತ್ತಾ ಗೆಳತಿಯೆಡೆಗೆ ಬಂದದ್ದೇ, ಕ್ಷಣದ ಸಹನೆಯೂ ಸಾಧ್ಯವಾಗದೆ, ವಿಚಾರಿಸಲು ಮುಂದಾಗುತ್ತಾಳೆ. ತನ್ನ ನಲ್ಲನು ತನ್ನನ್ನು ಪ್ರೀತಿಸುವನೋ ಇಲ್ಲವೋ ಎಂಬ ಶಂಕೆಯಿಂದ ಕೂಡಿ ವಿಷಣ್ಣವದನಳಾಗಿ, ಹೃದಯ ಉದ್ವೇಗದಿಂದುಷ್ಣವಾದ ನಿಶ್ವಾಸದಿಂದ ಬೆಂದ ತುಟಿಯುಳ್ಳವಳಾಗಿ, ಕಾತರಾನನೆಯಾಗಿ ತನಗಾಗಿ ಎದುರು ಕಾಯುತ್ತಿದ್ದ ರಾಣಿಯನ್ನು ಕಂಡ ಕೂಡಲೇ ವಿಷಾದ ವ್ಯಂಗ್ಯದಿಂದ, "ಮನ್ಮಥನ ಕೈದುವಿನಂತೆ, ಕೂರಸಿಯಂತೆ ಮನೋಹರವಾಗಿ ಹೊಳೆಯುವ ತೆಳುವಾದ ಮೈಯುಳ್ಳ ಕೋಮಲಯೇ; ಇಂತಹ ಮನ್ಮಥನನ್ನು ಎಲ್ಲೆಲ್ಲಿ ಹುಡುಕಿ ಆರಿಸಿ ಮೋಹಿಸಿದೆ ? ಆತನಿಗೆ ಸಮನಾದವನನ್ನು ಈ ಭೂಮಂಡಲದಲ್ಲಿ ಎಲ್ಲೆಲ್ಲಿ ಹುಡುಕಿದರೂ ನಿನಗೆ ಮತ್ತೊಬ್ಬನನ್ನು ತೋರಿಸಲು ಸಾಧ್ಯವಿಲ್ಲ" ಎಂದು ನುಡಿಯಲು ರಾಣಿ ಕಾತರತೆಯಿಂದ ಉದ್ವೇಗದಿಂದ, "ಹೇಳು ಹೇಳು ಸಖಿ. ನನ್ನ ಪ್ರಿಯನು ನನ್ನ ಗಂಡನಷ್ಟು ಸುಂದರನಾಗಿರುವನೇ ? ತಡಮಾಡದೆ ಹೇಳು. ನಿನ್ನ ಈನಿಧಾನ ನನ್ನನ್ನು ಕೊಲ್ಲುತ್ತಿದೆ." ಎಂದು ಅಳಲಿನಿಂದ ವಿಚಾರಿಸಿ, ಆತುರಪಡಿಸಲು, ಗುಣವತಿ ಅವನ ಸೌಂದರ್ಯವನ್ನು ಹೀಗೆ ವಿವರಿಸುತ್ತಾಳೆ. "ಕೇಳು ರಾಣಿ ! ಚೆನ್ನಾಗಿ ಕೇಳಿಸಿಕೋ ನಿನ್ನ ಪ್ರಿಯತಮನ ಹಣೆಯಲ್ಲಿ ಹಳ್ಳವಿದೆ, ಅವನ ತಲೆ ಬಟ್ಟ ತಲೆಯಾಗಿದೆ, ಕಣ್ಣುಗಳಲ್ಲಿ ನೀರು ಸುರಿಯುತ್ತಿದೆ. ಬಾಯಿಯಲ್ಲಿ ಸೊರೆ ಸುರಿಯುತ್ತಿದೆ, ಮೂಗು ಚಪ್ಪಟೆಯಾಗಿದೆ, ಕಿವಿಗಳು ಸುರುಟಿಕೊಂಡಿವೆ, ಹಲ್ಲುಗಳು ಸಂದುಬಿಟ್ಟಿವೆ, ಕತ್ತು ಕುಸಿ ಬಿದ್ದಿದೆ. ಎದೆ ಹಳ್ಳವಾಗಿದೆ, ಬೆನ್ನು ಗೂನಾಗಿದೆ, ಹೊಟ್ಟೆ ಊದಿದೆ, ಕಾಲುಗಳು ನಡುಮುರಿದ ಕತ್ತೆಯ ಕಾಲುಗಳಿಂತಿವೆ, ಚರ್ಮ ಮುದಿ ಕರಡಿಯ ಚರ್ಮದಂತಿದೆ, ಹೀಗೆ ಅಷ್ಟಾ ವಕ್ರನಾಗಿ ಒಣಗಿದ ಬೇಮಳ್ಳ ಕೊರಡಿನಂತೆ ಡೊಂಕು ಡೊಂಕಾಗಿರುವನು" ಎಂದು ವಿಡಂಬಿಸಿ

ವಿವರಿಸಿದಾಗ, ರಾಣಿ ಈಗಾಗಲೇ ವಿಕೃತ ಕಾಮದ ಸೆರೆಸಿಕ್ಕಿ, ಸಖಿಯ ವ್ಯಂಗ್ಯವನ್ನು ನಿರ್ಲಕ್ಷಿಸಿ, ಅವಳು ಬಣ್ಣಿಸಿದ ವಿಕಾರ ರೂಪದ ಬಗ್ಗೆ ಹೇಸಿಗೆ ಪಟ್ಟುಕೊಳ್ಳುವ ಬದಲು, ಅಂತಹ ವ್ಯಕ್ತಿಯನ್ನು ಪ್ರೀತಿಸುವುದೇ ದೊಡ್ಡತನವೆಂದು ಸಮರ್ಥನೆಗೆ ಹೊರಡುತ್ತಾಳೆ. ಅದಕ್ಕೂ ಮುನ್ನ ಒಂದು ಕ್ಷಣ, ಗದ್ಗದ ಕಂಠಳಾಗಿ, ಕಣ್ಣಲ್ಲಿ ನೀರೂರಿಸಿಕೊಂಡು, ಹೃದಯದುದ್ವೇಗದ ಬಡಿತದೊಂದಿಗೆ ಬೇಟೆಗಾರನ ಗುರಿಗೆ ಸಿಕ್ಕು ಸ್ತಬ್ಧವಾಗಿ ನಿಂತ ಜಿಂಕೆ ಮರಿಯಂತೆ ಸ್ತಬ್ಧವಾಗಿ ನಿಲ್ಲುತ್ತಾಳೆ. ಆದರೆ ಅದನ್ನು ತೋರಿಸಿಕೊಳ್ಳದೆ, ತನ್ನ ಮೋಹಕ್ಕೆ ಇನಿತೂ ಕುಂದಿಲ್ಲವಂತೆ, ಸಮರ್ಥಿಸಿಕೊಳ್ಳುವ ಪ್ರಯತ್ನಕ್ಕೆ ಹೊರಡುತ್ತಾಳೆ. ದನಿ ಕೇಳಿದ ಕ್ಷಣವೆ 'ಪಸಾಯದಾನ' ವಾಗಿ ಕೊಟ್ಟ ಮನಸ್ಸನ್ನು ಮರಳಿಸುವುದು ಅವಳಿಗೆ ಸಾಧ್ಯವಾಗುವುದೇ ಇಲ್ಲ. ಅವನ ವಿಕೃತ ರೂಪಿನ ವರ್ಣನೆ ಕೇಳಿಯೂ, ವಿಚಲಿತಳಾಗದೆ "ಪ್ರೀತಿಸಿದ ಮೇಲೆ ರೂಪಿನ ಹಂಗೇಕೆ ? ಕಾರ್ಯವಾದ ಮೇಲೆ ಕಾರಣ ಕಟ್ಟಿಕೊಂಡು ಏನಾಗಬೇಕು ? ಅವನು ಹೇಗಿದ್ದರೇನು ? ನನಗೆ ಅವನೇ ಇಂದ್ರಚಂದ್ರ ಕಾಮದೇವನಾಗಿದ್ದಾನೆ" ಎಂದು ಸಮರ್ಥಿಸಿಕೊಂಡು, ಗೆಳತಿಗೆ ಲಂಚರೂಪವಾಗಿ ಉಡುಗೊರೆಗೊಟ್ಟು ತನ್ನ ಪ್ರೀತಿಯನ್ನು ಅವನಿಗೆ ನಿವೇದಿಸಿ, ಅವನೊಡನೆ ಸಮಾಗಮಕ್ಕೆ ಸಜ್ಜುಗೊಳಿಸುವಂತೆ ಕೇಳಿಕೊಳ್ಳುತ್ತಾಳೆ. ಸಖಿಯೂ ಅದರಂತೆ ಅವನೊಂದಿಗೆ ಅಮೃತಮತಿಯ ಭೇಟಿಗಳಿಗೆ ಅನುವು ಮಾಡುತ್ತಾಳೆ.

ಅಮೃತಮತಿ ಹಗಲು ರಾತ್ರಿ ಅವನೊಡನೆ ಸುಖವನ್ನು ಅನುಭವಿಸುತ್ತ, ಅರಸನೂ, ಅಪರಮನ್ಮಥನೂ, ಭುವನೈಕ ಸುಂದರನೂ, ಮಡದಿಯನ್ನು ಅತ್ಯಂತ ಪ್ರೀತಿಯಿಂದ ಆರಾಧಿಸುವವನೂ ಆಗಿದ್ದ ಯಶೋಧರನಂತಹ ಗಂಡನನ್ನು ನಿರ್ಲಕ್ಷಿಸಿ, ಅವನ ಕಣ್ಣು ತಪ್ಪಿಸಿ, ಕಳ್ಳತನದಿಂದ ಮಾವುತನೊಡನೆ ಹಾದರಕ್ಕೆ ಒಲಿಯುತ್ತಾಳೆ. ಅವನೊಡನೆ ಪ್ರೀತಿ ಹೆಚ್ಚುತ್ತಿದ್ದಂತೆ ಪತಿಯ ಬಗ್ಗೆ ಅನುರಾಗವನ್ನು ಕರಗಿಸುತ್ತ, ಅವನನ್ನು ತಪ್ಪಿಸಿಹೋಗುವ ಅಮೃತಮತಿಗೆ, ಮಾವಿಗಿಂತ ಬೇವೇ ರುಚಿಯೆನಿಸುತ್ತದೆ.

ಯಶೋಧರನೊಡನೆ ಅವಳು ನಡೆಸುತ್ತಿದ್ದ ರತಿ ಕ್ರೀಡೆಗಳಲ್ಲಿ ಏನ್ನು ಕಾಣುತ್ತಿದ್ದ 'ಅನ್ಯಮನಸ್ಕತೆ, ಅರುಚಿಗಳನ್ನು ಗಮನಿಸಿದ

ಯಶೋಧರನ ಮನಸ್ಸಿನಲ್ಲಿ ಅನುಮಾನದ ಬೀಜಾಂಕುರವಾಗುತ್ತದೆ. ಅವಳ ಈ ಸ್ಥಿತಿಗೆ ಕಾರಣವೇನೆಂದು ಪತ್ತೆ ಹಚ್ಚಲು ನಿರ್ಧರಿಸಿ, ಅಂದಿನಿಂದ ಅವಳ ನಡವಳಿಕೆಯನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಹೋಗುತ್ತಾನೆ. ಒಮ್ಮೆ ಅವಳನ್ನು ಪರೀಕ್ಷಿಸುವ ಸಲುವಾಗಿಯೇ ರಾತ್ರಿಯಲ್ಲಿ ನಿದ್ರೆಯ ನಟನೆ ಮಾಡುತ್ತಾನೆ. ಅವಳೂ "ಹಗಲೆಲ್ಲಾ ನೈದಿಲೆ ಪುಷ್ಪದೊಳಗೆ ಬಂದಿಯಾಗಿದ್ದು ಹಗಲು ತೀರಿದೊಡನೆಯೇ ಅರಳುತ್ತಿರುವ ಪುಷ್ಪದಿಂದ ಹೊರಗೆ ಬರುವ ದುಂಬಿಯಂತೆ, ಅರಸನ ತೋಳ್ತೆರೆಯಲ್ಲಿ ಬಂದಿಯಾಗಿದ್ದವಳು ಮೆಲ್ಲನೆ ಅವನ ಆಲಿಂಗನದಿಂದ, ಬಾಹುಗಳ ಸೆರೆಯಿಂದ ಬಿಡಿಸಿಕೊಂಡು ತನ್ನ ಪ್ರಿಯನ, ವಿಟಪುರುಷನ ಬಳಿಗೆ ಹೊರಡುತ್ತಾಳೆ.

ಅವಳು ಹೋಗುವುದನ್ನೇ ಕಾಯುತ್ತಿದ್ದ ಯಶೋಧರ "ದೋಷದ ಬೆನ್ನಲ್ಲೇ ಹೋಗುವ ದಂಡದಂತೆ" ಒರೆಯಿಂದ ಹೊರತೆಗೆದ ಖಡ್ಗವನ್ನು ಹಿಡಿದು ಅವಳ ಬೆನ್ನ ಹಿಂದೆಯೇ ಹೋಗುತ್ತಾನೆ. ಮಾವುತನ ಬಳಿಗೆ ಹೋದದ್ದೇ, ತಡವಾಯಿತೆಂಬ ಕೋಪದಿಂದ ಮಾವುತ ಅವಳನ್ನು ಬೈದು, ಅವಳು ತಂದಿದ್ದ ಗಂಧ, ಪುಷ್ಪ, ಫಲಗಳನ್ನೆಲ್ಲ ಒದ್ದು ಈಡಾಡಿ, ಮುಂದಲೆ ಹಿಡಿದು ಎಳೆದು ಗಿಡುಗವು ಹಂಸದ ಮೇಲೆ ಎರಗುವಂತೆ ಎರಗಿ, ಹಗ್ಗದಿಂದ ಅವಳ ಬೆನ್ನ ಮೇಲೆ ಬಲವಾಗಿ ಹೊಡೆಯುತ್ತಾನೆ. ಅವಳು ನೋವಿನಿಂದ ವಿಲವಿಲನೆ ಒದ್ದಾಡಿ, ಅವನು ಹೊಡೆದರೂ ಅವನಿಗೆ ಕೋಪಿಸದೆ," ಪ್ರಾಣೇಶ್ವರ, ಇಂದು ತಡವಾದುದು ನಿಜ. ಒಪ್ಪಿಕೊಳ್ಳುತ್ತೇನೆ, ಆದರೆ ಇದಕ್ಕೆ ಕಾರಣ ನನ್ನ ಗಂಡನೆನಿಸಿಕೊಂಡ ಪಾತಕಿ, ನನ್ನನ್ನು ತನ್ನ ತೊಡೆಯ ಮೇಲೆ ಕೂರಿಸಿಕೊಂಡು ಮುದ್ದಾಡುತ್ತಾ ಕುಳಿತುಬಿಟ್ಟ. ಆದ್ದರಿಂದ ತಡವಾಯಿತು. ಕ್ಷಮಿಸು. ನಿನ್ನ ಧ್ವನಿಯೇ ನನಗೆ ಕರ್ಣಾಮೃತ, ನಿನ್ನ ರೂಪೇ ಕಣ್ಗಳ್ಗಾನಂದ, ನೀನು ನನ್ನ ಕೈ ಬಿಟ್ಟರೆ ನಾನು ಸಾಯುವೆನು, ನಿನ್ನ ಹೊರತು ಮಿಕ್ಕ ಪುರುಷರು ನನಗೆ ಸೋದರರು" ಎಂದೆಲ್ಲ ಹೇಳಿ ಅವನನ್ನು ಸಮಾಧಾನ ಪಡಿಸುತ್ತಾಳೆ.

ಅವರಿಬ್ಬರ ನಡವಳಿಕೆ ಅದರಲ್ಲಿಯೂ ತನ್ನ ಪತ್ನಿಯ ದ್ರೋಹ, ವಂಚನೆಗಳನ್ನು ಕಣ್ಣಾರೆ ಕಂಡ ಯಶೋಧರನ ಆಕ್ರೋಶಕ್ಕೆ

ಮಿತಿಯಿಲ್ಲವಾಗುತ್ತದೆ. ಆ ಕ್ಷಣವೇ, ಆ ಕ್ಷಣವೇ ಆ ಪತಿದ್ರೋಹಿಯನ್ ಕತ್ತರಿಸಿ ಬಿಡಬೇಕೆಂದು ಕೊಳ್ಳುತ್ತಾನಾದರೂ, ಹುಳುಗಳಿಗೆ ಸಮಾನವಾ ಕ್ಷುದ್ರವಾಗಿರುವ ಇವರನ್ನು ಕೊಂದು, ರಣದಲ್ಲಿ ಶತ್ರು ಸಂಹಾರಕ್ಕೆಂದ ಮೀಸಲಾಗಿರುವ ಈ ಖಡ್ಗಕ್ಕೆ ಕಳಂಕ ತಂದು ಕೊಳ್ಳುವುದ ಉಚಿತವಲ್ಲವೆನಿಸಿ, ಮನಸ್ಸನ್ನು ಹತೋಟಿಗೆ ತಂದುಕೊಳ್ಳುವನಾದರೂ ಹೆಂಡತಿಯ ದ್ರೋಹ ಅವನನ್ನು ಕಲಕಿಬಿಡುತ್ತದೆ. ಮಾನಸಿಕವಾ ಅಸ್ವಸ್ಥನಾಗುತ್ತಾನೆ. ತಾನು ಅವಳಿಗೆ ಬುದ್ಧಿ ಹೇಳಿ ಅವನಿಂದ ಅವಳನ್ ತಪ್ಪಿಸಿದರೂ ಅವಳ ಅನುರಾಗ ತಪ್ಪುವುದಿಲ್ಲ. ಆದ್ದರಿಂದ ಕೊಂದು ನರಕಕ್ ಹೋಗುವುದು ಬೇಡವೆಂದು ಸುಮ್ಮನಾಗುತ್ತಾನೆ.

ಮಗನ ಮುಖದಲ್ಲಿನ ಮ್ಲಾನತೆಯನ್ನು ಕಂಡು ಭಯಗೊಂಡ ಚಂದ್ರಮತಿ, ಮಗನನ್ನು ಕರೆದು ಅವನ ದುಃಖಕ್ಕೆ ಕಾರಣವೇನೆಂದು ವಿಚಾರಿಸಲು, ಹೆಂಡತಿಯ ದುರ್ನಡತೆಯನ್ನು ತಾಯಿಯ ಮುಂದ ಹೇಳಲಾಗದೆ, ಧ್ವನಿಪೂರ್ಣವಾಗಿ, 'ಅಮ್ಮ' ತಮ್ಮ ಆಶೀರ್ವಾದ ಬಲದಿಂದ ನನಗೆ ಯಾವುದಕ್ಕೂ ಕೊರತೆಯಿಲ್ಲ. ಕಳೆದ ರಾತ್ರಿ ಮಾತ್ರ ತಾವರ ಕೊಳದಲ್ಲಿ ಆಡುವ ಹಂಸೆಯೊಂದು ಆವಲು ಹೂಗಳಿರುವ ಕೊಳದಲ್ ವಿಹರಿಸುವುದನ್ನು ಕನಸಿನಲ್ಲಿ ಕಂಡೆ' ಎಂದು ಹೇಳಲು, ತಾಯಿಯ ಹೃದಯ ಇದು ಯಾವುದೋ ಅನಿಷ್ಟದ ಸೂಚನೆಯೆಂದು ಭಾವಿಸಿ, ಅದರ ಪರಿಹಾರಕ್ಕೆ ಹುಂಜವೊಂದನ್ನು ಬಲಿಗೊಡಲು ನಿರ್ಧರಿಸುತ್ತಾಳೆ. ಜೈನ ಧರ್ಮದಲ್ಲಿ ಹಿಂಸೆಗೆ ಅವಕಾಶವಿಲ್ಲವಾಗಿ ಹಿಟ್ಟಿನ ಹುಂಜವನ್ನು ಬಲಿಗೊಡಲು ನಿರ್ಧರಿಸುತ್ತಾಳೆ.

ಮತ್ತೊಂದು ರಾತ್ರಿ ಯಶೋಧರ ಅಮೃತಿಯರು ಮಾಮೂಲಿನಂತೆ ಸರಸ ಸಲ್ಲಾಪದಲ್ಲಿರುವಾಗ, ಅರಸ ಅವಳನ್ನು ಭೇಡಿಸಿ ನೆಯ್ದಿಲೆ ಹೂವಿನಿಂದ ಅವಳನ್ನು ಹೊಡೆಯಲು, ಅವಳು ಮೂರ್ಛೆ ಹೋಗುತ್ತಾಳೆ. ಅರಸನು ವ್ಯಂಗದಿಂದ "ಅಯ್ಯಯ್ಯೋ ಬನ್ನಿ ಬನ್ನಿ ಇವಳನ್ನು, ಈ ಸುಕುಮಾರಿಯನ್ನು ಎತ್ತಿರಿ. ಬಹಳವಾಗಿ ನೊಂದಿದ್ದಾಳೆ" ಎಂದು ನುಡಿಯುತ್ತಾನೆ. ಅಮೃತಮತಿಗೆ ಗಂಡನ ನಡೆವಳಿಕೆ, ಮೂದಲಿಕೆಗಳಿಂದ ತನ್ನ ರಹಸ್ಯ ತಿಳಿದಿದೆ ಎಂದು ಗ್ರಹಿಸಿ ಅವನನ್ನು ಹೇಗಾದರೂ

ಕೊಲ್ಲಬೇಕೆಂದು ನಿಶ್ಚಯಿಸಿ ಒಂದು ದಿನ ವನಭೋಜನಕ್ಕೆಂದು ಅವರನ್ನು (ತಾಯಿ ಮತ್ತು ಮಗನನ್ನು) ಆಹ್ವಾನಿಸುತ್ತಾಳೆ. ಯಶೋಧರ ಚಂದ್ರಮತಿಯರು ಅವಳ ಕಪಟವನ್ನರಿಯದೆ, ಒಲ್ಲದ ಮನಸ್ಸಿನಿಂದ ಹೋಗುತ್ತಾರೆ. ಊಟದಲ್ಲಿ ವಿಷದ ಲಡ್ಡುಗಳನ್ನು ಉಣಬಡಿಸಿ ಅಮೃತಮತಿ ಅವರಿಬ್ಬರನ್ನು ಕೊಲ್ಲುತ್ತಾಳೆ.

ಪ್ರೀತಿಯೇ ವಿಚಿತ್ರವಾದುದು ಪರಸ್ಪರ ಗಾಢವಾಗಿರುವ ಪ್ರೀತಿಯೇ ಮುರಿದು ಮತ್ತೊಂದರ ಕಡೆಗೆ ತಿರುಗುವುದಾದರೆ ಪ್ರೀತಿಯನ್ನು ಚಂಚಲವೆನ್ನಬಹುದೇ ? ಪ್ರಾಮಾಣಿಕವಾದ ಪ್ರೀತಿಯಲ್ಲೂ ಸ್ವಾರ್ಥ, ದ್ರೋಹ, ವಂಚನೆಗಳು, ಕ್ರೌರ್ಯ ಒಂಸೆಗಳು ಸೇರಬಲ್ಲವಾದರೆ ಪ್ರೀತಿಯಲ್ಲಿನ ಗುಣಾತ್ಮಕತೆಯ ಬಗ್ಗೆ ಏನು ತಾನೇ ಹೇಳಲು ಸಾಧ್ಯ. ಒಂದರ ಜೊತೆ ಗಾಢವಾಗಿ ಅಂಟಿಕೊಂಡಿರುವ ಪ್ರೀತಿಯೂ ಅದಕ್ಕಿಂತ ಪ್ರಬಲವಾದ್ದರ ಸೆಳೆತಕ್ಕೆ ಸಿಕ್ಕು, ಗಾಯಗೊಳಿಸಿಯಾದರೂ ಕಿತ್ತುಕೊಂಡು ಓಡುವುದು.

★ ★ ★

ನೆಲೆ - ೭

# ಎನ್ನಮೇಲಿಕ್ಕುವಾಚಿತ್ತದಾತುರತೆಯಂ ಪನ್ನಗಾಭರಣನೊಳುಮಾಳ್ಪುದು

ಪ್ರೀತಿಯ ಸಂಬಂಧಗಳು ಮನುಷ್ಯರ ನಡುವೆ ಮಾತ್ರ ಸಾಧ್ಯವೆಂದು ಭಾವಿಸಬೇಕಾದ್ದಿಲ್ಲ. ತತ್ವ ಪ್ರೀತಿ, ವಿಚಾರಪ್ರೀತಿ, ದೈವಪ್ರೀತಿ-ಹೀಗೆ ಎಷ್ಟೋ ಪ್ರೀತಿಯ ನೆಲೆಗಳಿವೆ. ಪ್ರೀತಿಸುವ ಕ್ರಿಯೆಯಲ್ಲಿ ಗಾಢತೆ, ತೀವ್ರತೆ, ಪರಸ್ಪರ ಶ್ರೇಯೋಭಿಲಾಷೆ, ಉದ್ದಾರಗಳ ಭಾವನೆಗಳಿದ್ದಾಗಲೇ ಪ್ರೀತಿಗೊಂದು ಅರ್ಥ, ಸಾರ್ಥಕ್ಯ ನಮ್ಮ ಇತಿಹಾಸ, ಸಂಸ್ಕೃತಿ ಪರಂಪರೆಯಲ್ಲಿ ಗಾಢ ಪ್ರೀತಿಗೆ ಒಳಗಾಗಿ (ಮನುಷ್ಯಪ್ರೀತಿಯಾಗಿರಬಹುದು, ದೈವ ಪ್ರೀತಿಯಾಗಿರಬಹುದು) ತಮ್ಮನ್ನು ತಾವು ತೆತ್ತುಕೊಂಡು ಅರ್ಪಿಸಿಕೊಂಡು ಅಮರರಾದವರು, ಅನುಭಾವಿಗಳಾದವರು, ದೈವಾನುಗ್ರಹ, ದೈವ ಸಾಕ್ಷಾತ್ಕಾರಕ್ಕೆ ಒಳಗಾದವರು ಹಲವಾರು ಮಂದಿ ಇದ್ದಾರೆ. ಲೌಕಿಕದ ನೆಲೆಯಲ್ಲಿ ಸಾಮಾನ್ಯ ಪ್ರೇಮೋತ್ಕಟತೆ ಕಾಮೋತ್ಕಟತೆಗಳಾಗಿ ಕಾಣುವುದೆಲ್ಲವನ್ನೂ ದೈವಮುಖಿಯಾಗಿ, ಶಿವಮುಖಿಯಾಗಿಸಿದ ಮಹಾಭಕ್ತರಿದ್ದಾರೆ, ಅನುಭಾವಿಗಳಿದ್ದಾರೆ. ಮುಮುಕ್ಷುಗಳಿದ್ದಾರೆ. ಇಂತಹವರಲ್ಲಿ ನಮ್ಮ ಕನ್ನಡದ ಕ್ರಾಂತಿಕವಿ ಎಂದೆನಿಸಿಕೊಂಡ, 13ನೇ ಶತಮಾನದ ಭಕ್ತ ಕವಿಯಾದ ಹರಿಹರನು ರಚಿಸಿರುವ ನೂರಾರು ರಗಳೆಗಳಲ್ಲಿ ಒಂದಾದ ಅತಿ ಚಿಕ್ಕದಾದ 'ಮಲುಹಣರಗಳೆ'ಯ ನಾಯಕ ಮಲುಹಣ ಒಬ್ಬ,

ಭೂಮಿಯ ಮೇಲೆ ಸಮಸ್ತ ಬಗೆಯಲ್ಲಿ ಸಮೃದ್ಧವೂ ಸಂಪನ್ನವೂ ಆದ ಕಾಶ್ಮೀರದೇಶ, ಆ ದೇಶದಲ್ಲಿ ತಟಾಕಗಳಿಂದ, ಪುಷ್ಪವನಗಳಿಂದ, ನವೀನ ವನಗಳಿಂದ, ಸೊಕ್ಕಿದ ತೆನೆಗಳಿಂದ ಕೂಡಿದ ಗದ್ದೆ, ತೋಟಗಳಿಂದ, ಸರಸ ಸಂದೋಹಗಳಲ್ಲಿ ಮೈಮರೆತ ನವತರುಣ, ತರುಣಿ ಸಮೂಹಗಳಿಂದ, ಎಲ್ಲೆಲ್ಲಿಯೂ ಸುಖ,ಸಮೃದ್ಧಿ, ಸಂತಸಗಳೇ ಎದ್ದು ಕಾಣುವಂತಿದ್ದ ಒಂದು ಪಟ್ಟಣ ಭಾರತೀಪುರ, ಈ ಪಟ್ಟಣವನ್ನಾಳುವ

ದೊರೆ ಪ್ರವರಸೇನ, ಈತನಿಗೆ ವಿಪ್ರನಾಗಿದ್ದ ಸುವರ್ಣಭಟ್ಟ ಕುಭೇರನಿಗೆ ಸರಿಸಾಟಿಯೆನಿಸಿದ್ದ. ದಾನ ಧರ್ಮಗಳಿಗೆಂದು, ಶಿವಾಲಯಗಳಿಗೆಂದು ಅಪಾರವಾಗಿ ಹಣವನ್ನು ಖರ್ಚು ಮಾಡುತ್ತಿದ್ದ ಅವನ ಶ್ರೀಮಂತಿಕೆಗೆ ಎಣೆಯಿಲ್ಲ. ಇಂತಹ ಕುಬೇರನಾದ ವಿಪ್ರ ಸುವರ್ಣಭಟ್ಟನಿಗೆ ಮಲುಹಣನೆಂಬ ಮಗನಿದ್ದ. ಮಗನ ಸುಖ ಸಂತೋಷಗಳನ್ನು ನೋಡಿ ನೋಡಿ ತಣಿದ. ಮನಸ್ಸು ವಯಸ್ಸಿಗೆ ಅನುಗುಣವಾದ ರೀತಿಯಲ್ಲಿ ಆಯಾ ಕಾಲಕ್ಕೆ ತಕ್ಕಂತೆ ಉಪನಯನ ವಿವಾಹಗಳನ್ನು ವೈಭವದಿಂದ ಮಾಡಿ ವೇದಜ್ಞರು ಮತ್ತು ಶಾಸ್ತ್ರಜ್ಞರ ಸಾನ್ನಿಧ್ಯದಲ್ಲಿ ಮಗನಿಗೆ ಶೈವೋಪದೇಶವನ್ನೂ ಮಾಡಿದ. ಮಗನೂ ದೈವಭಕ್ತಿಯಲ್ಲಿ, ದೈವ ಪ್ರೀತಿಯಲ್ಲಿ ತನ್ನನ್ನು ತೊಡಗಿಸಿಕೊಂಡು ಮತ್ತು ತಂದೆ ಒದಗಿಸಿಕೊಟ್ಟ ಎಲ್ಲ ಸುಖಗಳಿಂದಲೂ ದಿವ್ಯಾವಸ್ತ್ರಾಭರಣಗಳಿಂದ, ಕಸ್ತೂರಿ ಗಂಧ ಲೇಪನದಿಂದ ಕೂಡಿಕೊಂಡು (ಅಲಂಕರಿಸಿಕೊಂಡು) ಗೀತ, ವಾದ್ಯ, ನೃತ್ಯ ವಿನೋದ, ಸರಸೋಕ್ತಿಗಳಲ್ಲಿ ಕಾಲ ಕಳೆಯುತ್ತಿದ್ದ.

ತಂದೆ ಮಗನಿಗೆ ಈ ರೀತಿಯಲ್ಲಿ ಬೇಕು ಬೇಕಾದ ಎಲ್ಲ ಬಗೆಯ ಆಮೋದ ಪ್ರಮೋದಗಳಿಗೆ ಅನುಕೂಲ ಮಾಡಿಕೊಟ್ಟುದೇ ಅಲ್ಲದೆ ಮಗನ ಭವಿಷ್ಯದ ಬಗ್ಗೆ ದೂರದೃಷ್ಟಿಯುಳ್ಳವನಾಗಿ, ಒಬ್ಬ ಮನುಷ್ಯನ ಪೂರ್ಣಾಯುಸ್ಸು ನೂರು ವರ್ಷವೆಂದು ಭಾವಿಸಿ, ಅವರ ಲೆಕ್ಕಾಚಾರದ ಪ್ರಕಾರವಾಗಿ ದಿನಕ್ಕೆ ಸಾವಿರ ಹೊನ್ನಿನಂತೆ, ನೂರು ವರ್ಷಗಳಿಗೆ ಮೂರುಕೋಟಿ ಅರವತ್ತು ಲಕ್ಷ ಹೊನ್ನನ್ನು ಮೂಲ ಧನದಿಂದ ತೆಗೆದು ಪ್ರತ್ಯೇಕವಾಗಿ ಇರಿಸಿದ. ತನ್ನ ನಂತರ ಅವನಿಗೆಯಾವುದೇ ಬಗೆಯಲ್ಲಿ ಮಗನಿಗೆ ಹಣದ ಮುಗ್ಗಟ್ಟು ಒದಗಬಾರದೆಂಬ ದೂರಾಲೋಚನೆಯಿಂದ ಈ ವ್ಯವಸ್ಥೆ ಮಾಡಿದ. ಇದಾದ ಒಂದೆರಡು ವರ್ಷಕ್ಕೇ ಸುವರ್ಣಭಟ್ಟ ಕಾಲವಶನಾಗಲು ಮಲುಹಣ ಒಂದಷ್ಟು ಕಾಲ ತಂದೆಯಗಲಿಕೆಯ ದುಃಖಕ್ಕೆ ಒಳಗಾದರೂ, ನಂತರ ಎಲ್ಲ ಆಸ್ತಿಗೂ ತಾನೇ ಸ್ವಾಮಿಯಾದ. ಪರಿಜನರೆಲ್ಲರ ರಕ್ಷಕನೂ ಶಿಕ್ಷಕನೂ ಆಗಿ, ಉತ್ತಮ ವ್ಯವಹಾರ ಪರಿಣತಿಯಿಂದ ಮತ್ತಷ್ಟು ಸಂಪದವನ್ನು ಗಳಿಸಿದ.

ಮಲುಹಣನಲ್ಲಿ ಉದಯವಾಗಿದ್ದ ಯೌವ್ವನ [illegible]

ಪ್ರವರ್ಧಮಾನಕ್ಕೆ ಬರುತ್ತಿದ್ದಂತೆ, ಯೌವ್ವನ ಸಹಜವಾದ ಕಾಮಭೋಗಾಸಕ್ತಿ, ಪ್ರೀತಿಗಳೂ ಜೊತೆ ಜೊತೆಗೆ ಇಮ್ಮಡಿಸಿದವು. ಪಂಚೇಂದ್ರಿಯಗಳು ಸವಿರುಚಿಗೆ, ಸವಿನೋಟಕ್ಕೆ, ಸವಿಯಾಘ್ರಾಣಕ್ಕೆ, ಸವಿಸ್ಪರ್ಶಕ್ಕೆ, ಸವಿಶ್ರವಣಕ್ಕೆ ಹಾತೊರೆಯ ತೊಡಗಿದವು. ಹೀಗೆ ಅವನು ಪಂಚೇಂದ್ರಿಯಗಳ ಮೂಲಕ ಭೋಗ ಸಂಪದಕ್ಕೆ ಹಾರೈಸುತ್ತಿರುವಾಗಲೇ ಇವನ ರೂಪು, ನಡೆ ನುಡಿಗಳು ಲಲನೆಯರ ಮನಸ್ಸುಗಳನ್ನು ಸೂರೆಗೊಳ್ಳುತ್ತಿದ್ದವು. ಕವಿಯ ಮಾತಿನಲ್ಲೇ ಹೇಳುವುದಾದರೆ "ಅಂಗಲತೆ ತರುಣಿಯರ ಸಂಗ ಸಂಪದಮಾಗೆ, ಅಂಗರುಚಿ ಮುಗ್ಧೆಯರ ಕಣ್ಗೆ ಕನ್ನಡಿಯಾಗೆ" ಇವನ ಸೌಂದರ್ಯ ಹೊಗರೇರುತ್ತಿತ್ತು.

ಇದೇ ಪುರದಲ್ಲಿ ಮಲುಹಣನಷ್ಟೇ ಅನುಪಮ ರೂಪವತಿಯಾದ ಮಲುಹಣಿ, ಆ ಪುರದಲ್ಲಿನ ವಿಜಯೇಶ್ವರ ದೇವಾಲಯದ ಪಾತ್ರ ವಿಲಾಸಿನಿಯಾಗಿದ್ದ ಪದ್ಮಾವತಿ ಎಂಬುವಳ ಮಗಳಾಗಿ ಜನಿಸಿದಳು. ಇವಳಿಗೂ ಯೌವ್ವನೋದಯವಾಗಿ, ಅವಳ ಅಂಗಾಂಗಳನ್ನೆಲ್ಲ ಮನ್ಮಥನೇ ಆಕ್ರಮಿಸಿದಂತೆ, ನೋಡಿದವರ ಮನಸೆಳೆದು, ಕಾಮ ಪ್ರಚೋದನೆಗೆ ದಾರಿಮಾಡುವಂತೆ ಕಾಣಿಸುತ್ತಿದ್ದಳು. ಸರ್ವಾಂಗ ಸೌಂದರ್ಯದಿಂದ ಕೂಡಿದ ಈಕೆ ಚಲಿಸುವ ರೂಪಿನಂತೆ ಅಳಿತುಡುಂಕದ ಮಘುಮಘಿಪ ಬಿರಿಮುಗುಳಂತೆ, ಚಕೋರಿ ಮೊಗವಿಡದ ಚಂದ್ರಿಕೆಯಂತೆ ಪಿಕಚಂಚುಕದ ಸೋಂಕಿಲ್ಲದ ಎಳೆ ತಳಿರಂತೆ, ಶುಕ ಮುಖದಿಂದ ಎಂಜಲಾಗದ ಹಣ್ಣಿನಂತೆ, ಕುಸುಮಶರದಂತೆ ಕಂಗೊಳಿಸುತ್ತಿರಲು, ವಂಸತಮಾಸದಲ್ಲಿ ಒಂದು ದಿನ ವಿಜಯೇಶ್ವರನಿಗೆ ಗಾನ ನರ್ತನ ಸೇವೆಯನ್ನರ್ಪಿಸಲು ಮಗಳನ್ನು ಸಿಂಗರಿಸಿ, ಸಜ್ಜುಗೊಳಿಸಿ ಕರೆತರಲಾಗುತ್ತದೆ. ಹೊಸಕುಸುಮದೆಸಳು, ಮುಡಿದು, ಕಸ್ತೂರಿ ತಿಲಕವಿರಿಸಿ, ಸಕಲಾಭರಣ ಧರಿಸಿ, ತೆಳುವಾದ ದುಕೂಲವನ್ನುಟ್ಟು, ಮಲುಹಣಿಯ ರೂಪಿನ ಮರೆಯೊಳಡಗಿ ಬರುವ ಮನ್ಮಥನಂತೆ ಕಾಣಿಸಿದಳು.

ಮಲುಹಣಿ ರಂಗಭೋಗ ಮಂಟಪದಲ್ಲಿ ಓಲಗಗೊಟ್ಟಿದ್ದ ಪರಮ ಭಕ್ತರ, ರಾಜಪುತ್ರರ, ಪಟ್ಟ ವ್ಯವಹಾರಿಗಳ, ಕವಿಗಮಕ ವಾಗ್ಮಿಗಳ, ಕಲಾವಿದರ, ಸಾಹಿತ್ಯ ಸಂಪನ್ನರ ನಡುವೆ ಕರಡೆ, ಕಹಳೆ, ಮದ್ದಳೆ, ಕೌಪಾಳ

ಮುಂತಾದ ವಾದ್ಯಗಳ ಹಿಮ್ಮೇಳಕ್ಕೆ, ಲಯಕ್ಕೆ ನರ್ತಿಸುತ್ತಿರುವಲ್ಲಿ, ಅದೇ ಸಮಯಕ್ಕೆ ಅಲ್ಲಿಗೆ ಬಂದು ಕುಳಿತಿದ್ದ ಮಲುಹಣ ಅವಳ ರೂಪಿಗೆ ಸೆರೆಯಾಗುತ್ತಾನೆ. ನೋಟದ ಮೂಲಕ ಒಳಗಿಳಿದ ರೂಪವು ಭಾವವನ್ನು ಬರಿಗೈದು, ಚಿತ್ತವನ್ನುತೊತ್ತಳದುಳಿಯಲು, ತನ್ನ ಪಕ್ಕದಲ್ಲಿದ್ದ ಸ್ನೇಹಿತರ ಮೇಲೆ ಜೋಲ್ದು ಜೊಂಪಿನ ಮೈಯ್ಯನೀಡಾಗುತ್ತಾನೆ. ಅವನ ಈ ಸ್ಥಿತಿಯನ್ನು ಗಮನಿಸಿದ ಮಲುಹಣೆಯ ಮನಸ್ಸು ಬೆದರಿ, ನಡುಗಿ ಬೆಮರ್ತು ಸ್ತಂಭಿಸಿ ನಿಂತುಬಿಡುತ್ತಾಳೆ. ಅವರಿಬ್ಬರ ಸ್ಥಿತಿಯನ್ನರಿತ ಪದ್ಮಾವತಿ ಇದು ಇಬ್ಬರ ನಡುವೆ ಉಂಟಾದ ಪ್ರೀತಿ, ಮೂರ್ಛೆಗೆ ಸಲ್ಲಿಸಿದ ಕಾಮವೆಂದು ಕೂಡಲೇ ಗ್ರಹಿಸಿದಳು. ಪರಿಚಯವ ನಂತರ, ಮಲುಹಣ ಕುಬೇರ ಸದೃಶ ಶ್ರೀಮಂತನೆಂದರಿತು, ಅವರಿಬ್ಬರನ್ನೂ ಒಟ್ಟುಗೂಡಿಸಲು ಯಾವುದೇ ಬಗೆಯ ವಿರೋಧವನ್ನು ತೋರದೆ, ಅವರನ್ನು ಕರೆತಂದು ಮದನ ಕೇಸಳೀದನವೆನಿಸುವ ಸಜ್ಜೆ ಮನೆಯನ್ನು ಹೊಗಿಸಿ ಅವರಿಬ್ಬರ ಅನಂಗ ಕೇಳಿಗೆ ಸರ್ವಾನುಕೂಲವನ್ನು ಒದಗಿಸುತ್ತಾಳೆ.

ಮಲುಹಣ ಮಲುಹಣೆಯರು ನೋಟ, ಮಾಟ, ಕೂಟಗಳಲ್ಲಿ ಒಂದಾಗಿ ಸಮರತಿಯೊಳದ್ದು ಹೋಗಿ ಸುಖದ ಸೊಕ್ಕು ಮಿಕ್ಕೇರಿ, ನಲಿವು ತಲೆಗೆತ್ತಿತು. ಅವರು "ನೆರೆವ ಸುಖ ಸಮಯದೊಳು ಕರಣವೆಲ್ಲಂ ನೋಟ, ನೋಟವೆಲ್ಲಂ ನುಡಿ, ನುಡಿಯಲ್ಲಂ ವಿರಹ, ವಿರಹವೆಲ್ಲಂ ದೈನ್ಯ, ದೈನ್ಯವೆಲ್ಲಂ ಸಾತ್ವಿಕ, ಸಾತ್ವಿಕವೆಲ್ಲಂ ರಸವಾಗಿ" ಹೀಗೇ ಮುಂದುವರಿಯಲು ವರ್ಷಗಳೇ ಕ್ಷಣಗಳಾಗಿ ಕಳೆದು ಹೋದವು. ನೂರು ವರ್ಷಕ್ಕೆಂದು ಇರಿಸಿದ ಹಣವೆಲ್ಲ ಹತ್ತು ವರ್ಷಗಳಲ್ಲೇ ಕರಗಿ ಹೋಯಿತು. ಹಣ ತೀರಿದರೂ ಮನತೀರಲಿಲ್ಲ. ಮುಡಿದ ಹೂ ಅಗಲಿದರೂ ಪರಿಮಳವು ಅಗಲದಂತೆ, ಮೋಹರಸವಾರದೆ, ಪ್ರೀತಿ ಸವೆಯದೆ, ಮಲುಹಣ, ಮಲುಹಣೆಯರು ಪರಮಾನುರಾಗದಿಂದಿರಲು, ಹಣವಿಲ್ಲದೆ ಕಂಗಾಲಾದ, ಧನಕ್ಷಾಮದಿಂದ ಬಡವಾದ ಮಲುಹಣ ಪದ್ಮಾವತಿಗೆ ಬೇಡವಾದ, ಪಗಳಾದ ಮಲುಹಣೆ ತನ್ನ ಇನಿಯನನ್ನು ಬಿಡಲಾಗದೆ ಅಳಲುತ್ತಿದ್ದರೂ ಬಳಲುತ್ತಿದ್ದರೂ, ನಿರ್ದಯಿಯಾದ ತಾಯಿ ಅವರಿಬ್ಬರನ್ನು ಬೇರ್ಪಡಿಸಲು ಮುಂದಾಗುತ್ತಾಳೆ. ಅವರಿಬ್ಬರೂ ಅನ್ಯೋನ್ಯಾನುರಾಗದಿಂದ ಅಪ್ಪಿ

ಒಂದಾಗಿರಲು, ಆಮಿಷವನ್ನೊಡ್ಡಿ, ಮಗಳನ್ನು ಮಾವಿನ ಮರವನ್ನಪ್ಪಿದ ಮಲ್ಲಿಗೆಯ ಬಳ್ಳಿಯನ್ನು ಆಗಲಿಸುವಂತೆ, ಭೇರುಂಡ ಪಕ್ಷಿಯನ್ನು ಮಧ್ಯದಲ್ಲಿ ಸೀಳುವಂತೆ ಕ್ರೂರವಾಗಿ ಬೇರ್ಪಡಿಸುತ್ತಾಳೆ. ಮಲುಹಣೆ ಅಸಹಾಯಕಳಾಗಿ ಮಲುಹಣನತ್ತ ದೈನ್ಯ ದೃಷ್ಟಿಯನ್ನಿರಿಸಿ, ಅವನನ್ನು ಬಿಡಲಾಗದೆ ಅಸಹಾಯಕವಾಗಿ ಚೀರುತ್ತಾ, ಕೈಯ ಚಾಚುತ್ತ, ತಾಯಿಯನ್ನೂ ಪಾಪಿ, ಸುಖವೈರಿ, ಎಂದು ನಿಂದಿಸುತ್ತ ತಮ್ಮನ್ನಗಲಿಸಲು ಕಾರಣವೇನೆಂದು ಕೇಳುತ್ತಾಳೆ. ಒಂದಿಷ್ಟೂ ದಯೆ, ದಾಕ್ಷಿಣ್ಯಗಳಿಲ್ಲದ ತಾಯಿ "ಎಲೆ ಮರುಳ್ತಗಳೆ, ಅರ್ಥಂ ತೀರ್ದುರ್ನಮು. ಯೌವ್ವನಂ ಸ್ತೋರ್ದುರ್ನಮು" ಎಂದು ನಿರ್ಭಾವಪೂರ್ಣವಾಗಿ ಉತ್ತರಿಸುತ್ತಾಳೆ. ಅವಳು ವೃತ್ತಿಯಿಂದ ವೇಶ್ಯೆ, ಮನುಷ್ಯ ಸಂಬಂಧಗಳು ಅದರಲ್ಲಿಯೂ ಹೆಣ್ಣು-ಗಂಡು ಸಂಬಂಧವನ್ನು ಕೇವಲ ಹಣದ, ಲಾಭದ ಪರಿಭಾಷೆಯಲ್ಲಿ ಮಾತ್ರ ಗ್ರಹಿಸಬಲ್ಲವಳು. ಮನಸ್ಸುಗಳ ನಡುವಿನ ಪ್ರೀತಿಯ ಗಾಢತೆಯನ್ನು ಅರ್ಥಮಾಡಿ ಕೊಳ್ಳಲು ಅಸಮರ್ಥಳಾದ್ದರಿಂದಲೇ ಮಗಳನ್ನು ಅವನಿಂದ ಬಲವಂತದಿಂದ ಸೆಳೆದುಕೊಂಡು ಬೇರ್ಪಡಿಸುತ್ತಾಳೆ. ಅವರಿಬ್ಬರ ನೋವು, ವಿರಹಗಳು ಅವಳನ್ನು ಅಣುವಿನಷ್ಟೂ ಸೋಂಕುವುದಿಲ್ಲ. ಮಲುಹಣನ ಸಂಪತ್ತೆಲ್ಲವನ್ನೂ ಸುಲಿಗೆ ಮಾಡಿ ನಿಷ್ಠುರವಾಗಿ ಅವನನ್ನು ಮನೆಯಿಂದ ಹೊರದಬ್ಬುತ್ತಾಳೆ. ಆದರೆ ಮಗಳ ಮರಣಾವಸ್ಥೆಯೆನಿಸುವಂತಹ ವಿರಹಾಕುಲ ಸ್ಥಿತಿಗೆ ಹೆದರಿ ಸ್ವಲ್ಪ ಸ್ವಲ್ಪ ಅವಕಾಶ ಕೊಟ್ಟು ಬೇರಾಗಿಸಲು ಅಭ್ಯಾಸ ಮಾಡಿ, ಮಲುಹಣನನ್ನು ಮೂದಲಿಸಿ, ಅವನ ಮೇಲೆ ನೀರೆಲ್ಲ ಚೆಲ್ಲಿ, ವಿನಾ ಕಾರಣ ಅವನೊಂದಿಗೆ ಜಗಳ ತೆಗೆದು ಹಲವು ಪರಿಯಲ್ಲಿ ಅವನನ್ನು ಅವಮಾನಗೊಳಿಸುತ್ತಾಳೆ.

ಮಲುಹಣೆಯ ಮನೆಯಿಂದ ಹೊರಹಾಕಿಸಿಕೊಂಡ ಮಲುಹಣನ ಸ್ಥಿತಿ ಚಿಂತಾಜನಕವಾಗುತ್ತದೆ. ಮಲುಹಣೆಯ ಪ್ರೀತಿ, ಕಾಮದ ಎಲ್ಲೆಗಳನ್ನು ಮೀರಿ ಅವಳ ಸಾಂಗತ್ಯಕ್ಕೆ ತಹತಹಿಸುತ್ತದೆ. ರಕ್ಕಸಿ ಪದ್ಮಾವತಿ ಅವನನ್ನು ಹೊರದಬ್ಬಿದರೂ, ಮಲುಹಣೆಯ ಧ್ಯಾನದಲ್ಲಿ ಮನೆಯ ಮುಂದೆಯೇ ನಿಂತು ಅವಳ ಹೆಸರನ್ನು ಜಪಿಸುತ್ತಾನೆ. ಪ್ರೀತಿಯ. ಅತಿರೇಕದಲ್ಲಿ ಮತಿಭ್ರಾಂತನಾಗಿ, ಮಲುಹಣೆ, ಮಲುಹಣೆ ಎಂದು ಹಂಬಲಿಸುತ್ತ ಬಿಸಿಲೆನ್ನದೆ, ಛಳಿಯೆನ್ನದೆ. ಹಸಿವು ನೀರಡಿಕೆಗಳ ಪರಿವೆಯಿಲ್ಲದೆ.

ವಿರಹಾಗ್ನಿದಗ್ಧನಾಗಿ ಅಲೆದಲೆದು ಮತ್ತೆ ಅವಳ ಮನೆಯ ಬಾಗಿಲ ಮುಂದೆ ಬಂದು ನಿಲ್ಲುತ್ತಾನೆ. ಹೊರಗಿನಿಂದಲೇ ಮಲುಹಣೆಯ ದನಿಕೇಳ್ದು 'ಮಾರಾಗುತಂ' ಕಣ್ಣಲ್ಲಿ ಅವಳಿಗಾಗಿ ಅರಸುತ್ತ ಮಧ್ಯರಾತ್ರಿಯವರೆಗೂ ಅಲ್ಲಿಯೇ ನಿಂತಿದ್ದು, ಎಂಜಲು ನೀರನ್ನೂ ಮೈಮೇಲೆ ಚೆಲ್ಲಿಸಿಕೊಳ್ಳುತ್ತಾನೆ. ಶೀತಕಾಲವಾದರೂ ಲೆಕ್ಕಿಸದೆ ಹಿಮಪಾತ ಮಾಡಿಸಿಕೊಂಡು ತಾನೂ ಹಿಮಗಡ್ಡೆಯಾಗಿ ನಿಂತಿರಲು, ಬೆಳಿಗ್ಗೆ ಮಲುಹಣೆಗೆ, ಮಲುಹಣ ಹಿಮದಲ್ಲಿ ಮುದುಂಟಿದನೆಂಬುದನ್ನು ತಿಳಿದು, ಅವನ ಈ ಸ್ಥಿತಿಗೆ ತಾನೇ ಕಾರಣವೆಂದರಿತು 'ಪಾಪಿಯಾದೆನೆಂದು ತನ್ನನ್ನು ತಾನೇ ನಿಂದಿಸಿಕೊಂಡು, ಕೂಡಲೇ ಮಲುಹಣನನ್ನು ಹಿಮದ ಸಂಕೋಲೆಯಿಂದ ಬಿಡಿಸಿ, ಕರುಣೆ ಪ್ರೀತಿ, ಅಸಹಾಯಕತೆಗಳಿಂದ ಅವನತ್ತ ನೋಡಿ ದುಃಖ ಮರುಕಗಳಿಂದ "ಎನ್ನ ಮೇಲಿಕ್ಕುವಾ ಚಿತ್ತದಾತುರತೆ" ಯಂ ಪನ್ನಗಾಭರಣನೊಳು ಮಾಳ್ಪುದೆನ್ನೊಲುಮೆಯಂ...." ಇಂದುಧರನಂ ಬೇಡು ನಿನ್ನತ್ತ ನಾಂ ಬಪ್ಪೆ, ಎನ್ನಹವಣೇ ಕೋಟಿ ಮಲುಹಣೆಯರಾಗರೇ- ಎಂಬ ಮಾತುಗಳನ್ನು ಕೇಳಿಸಿಕೊಂಡ ಮಲುಹಣ ಆ ಕ್ಷಣವೇ ತನ್ನೆಲ್ಲ ವಿರಹವನ್ನು, ಪ್ರೀತಿ, ಸ್ನೇಹಗಳನ್ನು ಶಿವನಡಿಗೆ ಹೊರಳಿಸಿ, ಶಿವನನ್ನು ವಿರಹ ಸ್ತೋತ್ರಗಳಿಂದ ಆರಾಧಿಸುತ್ತಾನೆ. ತನಗೊಲಿದು ಕರುಣಿಸಬೇಕೆಂದು ಆರ್ತನಾಗಿ ಬೇಡಿಕೊಳ್ಳುತ್ತಾನೆ. ತನ್ನ ಮನೋರಥವನ್ನು ಈಡೇರಿಸಬೇಕೆಂದು ತ್ರಿಕರಣ ಶುದ್ಧಿಯೊಂದಿಗೆ ಯಾಚಿಸುತ್ತಾನೆ. ಶಿವನೂ ಭಕ್ತವತ್ಸಲ, ಪ್ರೇಮಾರ್ತ ಕಾಮಾರ್ತನಾದ ಮಲುಹಣನ ನೈಜ ಭಕ್ತಿಯ ಮುಂದೆ ಸೋಲುತ್ತಾನೆ ಪ್ರತ್ಯಕ್ಷನಾಗುತ್ತಾನೆ. ಅವನು ಬೇಡಿದ ಮಲುಹಣೆಯ ಸಾಂಗತ್ಯವನ್ನು ಕರುಣಿಸುತ್ತಾನೆ.

ಮಲುಹಣನಿಗೆ ತಾನು ಬೇಡಿದ ಮಲುಹಣೆ, ಅವಳ ಪ್ರೀತಿ ಎಲ್ಲವೂ ಮೊದಲಿನಂತೆ ಲಭ್ಯವಾಗಿವೆ. ಆದರೆ ಆ ಪ್ರೀತಿಯನ್ನು ಒಪ್ಪಿಕೊಂಡು ನಿರ್ವಹಿಸುವ ರೀತಿ ಭಿನ್ನವಾಗುತ್ತದೆ. ಮಲುಹಣ - ಮಲುಹಣೆಯರ ನಡುವೆ ಮೊದಲಿದ್ದ ಪ್ರೀತಿ ಲೌಕಿಕ ನೆಲೆಯದು. ಕಾಮ ಸಂಬಂಧವಾದ್ದು. ಆದರೆ ಈಗ ಅದನ್ನು ಪ್ರೀತಿಯ ಸ್ವರೂಪವನ್ನು ಅರಿತ ಮಲುಹಣ ಲೌಕಿಕ ಪ್ರೀತಿ ಮತ್ತು ದೈವ ಪ್ರೀತಿಗಳೆರಡನ್ನೂ ಬೆಸೆಯುತ್ತಾನೆ. ಅನನ್ಯವಾಗಿಸುತ್ತಾನೆ. ತಮ್ಮಿಬ್ಬರ ನಡುವಿನ ಪ್ರೀತಿ ದೈವಿಕ

ಪ್ರೀತಿಯಾಗುತ್ತದೆ. ಹೊರನೋಟಕ್ಕೆ ಅದು ಭೌತಿಕ, ದೈಹಿಕ, ಕಾಮ ಮೂಲವಾದ ಲೈಂಗಿಕ ಚರ್ಯೆಗಳೆನಿಸಿದರೂ ಮೂಲಭೂತವಾಗಿ ಅದು ಭಕ್ತಿಯಾಚರಣೆಯ, ಶಿವಾರ್ಪಣೆಯ ರೀತಿಯಾಗಿದೆ. ಈಗ ಅವನು ಕೇವಲ ಕಾಮಿಯಲ್ಲ, ಪ್ರೇಮಿಯಲ್ಲ. 'ಭಕುತಜನ ಮುಖ ಕಮಳ ಮಾರ್ತಾಂಡನಾಗಿದ್ದಾನೆ. ತಾನು ಮಾಡುವ ಪ್ರತಿಯೊಂದು ಕೆಲಸವೂ ಶಿವಾರ್ಪಿತ ಎನ್ನುವ ಮನೋಭಾವದಿಂದ ಮಾಡುವಂಥಾದ್ದೇ ಆಗಿದೆ. ಅವನು ಸಮಚಿತ್ತದಿಂದ," ಕಾಮಮುಂ ಕ್ರೋಧಮುಂ ಕಾಮಾರಿಗರ್ಪಿತಂ! ನೇಮಮುಂ ಪ್ರೇಮಮುಂ ಶಂಕರಂಗರ್ಪಿತಂ ! ನೋಟಮುಂ ಬೇಟಮುಂ ಪುರಹರಂಗರ್ಪಿತಂ! ಕೂಟಮುಂ ತೃಪ್ತಿಯುಂ ತ್ರಿಣಯನಂಗರ್ಪಿತಂ" ಎಂದು ಅನುಭೂತಿ ಸ್ಥಿತಿಗಳೆಲ್ಲವನ್ನೂ ತನ್ನ ಆರಾಧ್ಯ ದೈವ ಶಿವನಗರ್ಪಿಸಿ ಪ್ರೀತಿ, ಪ್ರೇಮ, ಭಕ್ತಿಯ ಸ್ಥಿತಿಗಳನ್ನು ಒಂದಾಗಿಸುತ್ತಾನೆ, 'ಪ್ರೇಮ-ಭಕ್ತಿ' ಅದ್ವೈತ ತತ್ವವಾಗಿ ಪರಿಣಮಿಸುತ್ತದೆ. ಇಂತಹದೇ ಸ್ಥಿತಿ ತುಳಸೀದಾಸ, ಮತ್ತು ಹರಿಹರನೇ ಬರೆದಿರುವ ಪ್ರಭುದೇವರ ರಗಳೆಗಳಲ್ಲೂ ಕಾಣುತ್ತೇವೆ.ಹೆಂಡತಿಯನ್ನು ಅಪಾರವಾಗಿ ಪ್ರೀತಿಸುತ್ತಿದ್ದ ಮತ್ತು ಒಂದರೆ ಕ್ಷಣವೂ ಅಗಲಿರಲಾಗದೆ ಪರಿತಪಿಸುತ್ತಿದ್ದ ತುಳಸೀದಾಸ ಹೆಂಡತಿಯನ್ನು ಅನಿವಾರ್ಯವಾಗಿ ತವರಿಗೆ ಕಳಿಸಬೇಕಾಗಿ ಬಂದಾಗ, ಆಕೆ ತವರಿನಲ್ಲಿರಲು, ತುಳಸೀದಾಸನಿಗೆ ಅವಳ ಅಗಲಿಕೆ ಅಸಹನೀಯವಾಗಿ, ಚಳಿ, ಗಾಳಿ, ಮಳೆಯನ್ನೂ ಲೆಕ್ಕಿಸದೆ, ಹೆಂಡತಿಯ ತವರಿನವರು ತನ್ನ ಕಾಮಾತುರತೆಯನ್ನು ನೋಡಿ ನಗಬಹುದೆನ್ನುವ ಪ್ರಜ್ಞೆಯೂ ಇಲ್ಲದೆ ಹೊರಟು ಕತ್ತಲ ರಾತ್ರಿಯಲ್ಲಿ ಹಾವನ್ನೇ ಹಗ್ಗವೆಂದು ಹಿಡಿದು ಒಳನುಗ್ಗಿ ಹೆಂಡತಿಯನ್ನು ಕಂಡಾಗ, ಹೆಂಡತಿ ರತ್ನಾವಳಿಗೆ ಗಂಡನಿಗೆ ತನ್ನ ಮೇಲಿದ್ದ ಅಪಾರ ಪ್ರೀತಿಯನ್ನು ನೋಡಿ ಸಂತೋಷವಾಗುವುದಕ್ಕೆ ಬದಲಾಗಿ ಹೇಸಿಕೆಯಾಗುತ್ತದೆ, ಮರುಕವೂ ಉಂಟಾಗುತ್ತದೆ. ಗಂಡನನ್ನು ದಾರಿಗೆ ಹಚ್ಚಬೇಕೆನಿಸಿ, "ಅಸ್ಥಿ ಚರ್ಮಗಳಿಂದ ಕೂಡಿದ ಈ ದೇಹದ ಮೇಲಿರಿಸುವ ಪ್ರೀತಿಯನ್ನು ರಾಮನ ಮೇಲಿರಿಸಿದರೆ ಭವಭೀತಿಯೆನ್ನವುದೇ ಇಲ್ಲವಾಗುತ್ತದೆ' ಎನ್ನಲು ತುಳಸೀದಾಸನಿಗೆ ಆ ಮಾತುಗಳು ಮನಸ್ಸಿಗೆ ನಾಟಿ ಆ ಕ್ಷಣದಿಂದಲೇ ತನ್ನೆಲ್ಲ ಪ್ರೀತಿಯನ್ನು ಭಕ್ತಿಯ ಕಡೆಗೆ ಹೊರಳಿಸುತ್ತಾನೆ. ರಾಮಭಕ್ತಿಯ ತೀವ್ರತೆ ಅವನಿಂದ ಜಗತ್ತಿಗೊಂದು

ರಾಮಕಾವ್ಯ ಲಭಿಸುವಂತೆ, ಮಾಡುತ್ತದೆ.

ಪ್ರೀತಿಗೆ ಅಖಂಡ ಶಕ್ತಿಯಿದೆ. ಬದುಕಿನಲ್ಲಿ, ಬದುಕಿನ ಸ್ಥಿತಿಗಳಲ್ಲಿ, ಅನುಭೂತಿಗಳಲ್ಲಿ ಎಂತಹ ಬದಲಾವಣೆಗಳನ್ನಾದರೂ ತರಿಸಬಲ್ಲದು. ಮಾನವರನ್ನು ಅತಿಮಾನವದೆತ್ತರಕ್ಕೂ ಏರಿಸಬಲ್ಲುದು.

★ ★ ★

ನೆಲೆ - ೮

# ಸತ್ಯವನು ಬಿಟ್ಟಿರಸೆನಿಸಿದಡೆ ಸಾಕು.

ಪ್ರೀತಿ ಎನ್ನುವುದು ಮನುಷ್ಯ ಸಂಬಂಧಗಳಲ್ಲಿ ಮಾತ್ರವೇ ಕಾಣಿಸಿಕೊಳ್ಳುವುದಲ್ಲ. ಮೌಲ್ಯಗಳು, ವಿಚಾರಗಳು ಮುಂತಾದವುಗಳ ಬಗ್ಗೆ ಕೆಲವೊಮ್ಮೆ ಪ್ರೀತಿ ಅತಿರೇಕದ ಸ್ಥಿತಿಯಲ್ಲಿರುತ್ತದೆ. ಬದುಕು. ಮಾನವೀಯ ಸಂಬಂಧಗಳಲ್ಲಿನ ಪ್ರೀತಿಗಿಂತ ಮೌಲ್ಯನಿಷ್ಠೆಯ ಬಗ್ಗೆ ತಳೆದ ಪ್ರೀತಿ ಒಂದು ಬಗೆಯ ಅಬ್ಸೆಷನ್ ಆಗಿಬಿಡುತ್ತದೆ. ಮೌಲ್ಯ ಚಿಂತನೆಯೇ ಮನಸ್ಸನ್ನೆಲ್ಲ ಆವರಿಸಿಕೊಂಡು ಬಿಟ್ಟಿರುತ್ತದೆ. ತಾನು ನಂಬಿದ ಮೌಲ್ಯದ ಬಗೆಗಿನ ಪ್ರೀತಿ ಎಷ್ಟು ದಟ್ಟವಾಗಿರುತ್ತದೆಂದರೆ. ಅದನ್ನು ಉಳಿಸಿಕೊಳ್ಳಲು, ಅದರ ಬಗ್ಗೆ ತನ್ನ ನಿಷ್ಠೆಯನ್ನು ಸ್ಥಾಪಿಸಲು ಭೌತಿಕ ಸುಖ ಸಾಧನಗಳನ್ನು, ಅಧಿಕಾರ ಮೋಹವನ್ನು ಭಾವನಾತ್ಮಕ ಸಂಬಂಧಗಳನ್ನು ಕ್ಷುಲ್ಲಕವಾಗಿ ಭಾವಿಸಿ, ಮೌಲ್ಯ ರಕ್ಷಣೆಯ ಪ್ರಯತ್ನದಲ್ಲಿ ಎದುರಾಗುವ ನೋವು, ಸಾವುಗಳನ್ನು ತೀರಾ ಸಹಜ, ಸಾಮಾನ್ಯ ಅನಿವಾರ್ಯವೆನ್ನುವಂತೆ ಸ್ವೀಕರಿಸಲಾಗುತ್ತದೆ. ಬದುಕಿಗೆ ಶ್ರೇಷ್ಠ ಅಥವಾ ಪರಮ ಮೌಲ್ಯಗಳೆಂದು ಭಾವಿಸಿರುವ ಸತ್ಯ, ಸ್ನೇಹ, ವಾನಶೀಲತೆ, ಕರುಣೆ ಮುಂತಾದವುಗಳಿಗಾಗಿ ಅನೇಕ ಬಗೆಯಲ್ಲಿ ತ್ಯಾಗ ಮಾಡಿದ ಪುರಾಣ ವ್ಯಕ್ತಿಗಳಿದ್ದಾರೆ. ವಾಸ್ತವ ಲೋಕದ ವ್ಯಕ್ತಿಗಳೂ ಇದ್ದಾರೆ. ಇಂತಹ ವ್ಯಕ್ತಿಗಳು ಸೃಜನಶೀಲ ಕವಿಗಳಿಗೆ, ಲೇಖಕರಿಗೆ ಸ್ಫೂರ್ತಿಯಾಗಿ, ಕಾವ್ಯ, ಮಹಾಕಾವ್ಯಗಳ ರಚನೆಗೆ ಪ್ರೇರಕ ತತ್ವಗಳಾಗಿ ಪರಿಣಮಿಸುತ್ತಾರೆ. ಮಾನವ ಲೋಕದಲ್ಲಿ ಆದರ್ಶಪ್ರಾಯರಾಗಿ ನಿಲ್ಲುತ್ತಾರೆ.

ಹರಿಶ್ಚಂದ್ರನ ಸತ್ಯನಿಷ್ಠೆಯು ಕತೆ ಪುರಾಣ, ಕಾವ್ಯಗಳಲ್ಲಿ ಸಾಕಷ್ಟು ಪ್ರಚಲಿತವಿದ್ದರೂ ಕನ್ನಡ ಕಾವ್ಯ ಪರಂಪರೆಯಲ್ಲಿ ಹರಿಹರನ ಸೋದರಳಿಯನಾದ ರಾಘವಾಂಕನ ಹರಿಶ್ಚಂದ್ರ ಕಾವ್ಯಕ್ಕೆ ತನ್ನದೇ ಆದ ವಿಶಿಷ್ಟತೆಯಿದೆ. ಮನುಷ್ಯರನ್ನು ಅವರು ಎಷ್ಟೇ ದೊಡ್ಡ ವ್ಯಕ್ತಿಗಳಾದರೂ ಕಾವ್ಯಕ್ಕೆ ಕೇಂದ್ರವಸ್ತುವಾಗಿಸಿಕೊಳ್ಳುವುದಿಲ್ಲವೆಂಬ ಧೀರ ನಿಷ್ಠೆ ತಳೆದ ಹರಿಹರ ಗುರುವಿನ ಆಶಯ, ಶಿವಭಕ್ತರಿಗೆ ವಿರುದ್ಧವಾಗಿ ಮನುಜನಾದ

ಹರಿಶ್ಚಂದ್ರನನ್ನು ಅವನ ಮೌಲ್ಯ ನಿಷ್ಠೆಗಾಗಿ ಮೆಚ್ಚಿ ತನ್ನ ಕಾವ್ಯಕ್ಕೆ ವಸ್ತುವಾಗಿ ಬಳಸಿಕೊಂಡು ಹರಿಹರನ ಆಗ್ರಹಕ್ಕೆ ಗುರಿಯಾಗಬೇಕಾಯಿತು. ಆದರೆ ರಾಘವಾಂಕನಿಗೆ ಹರಿಶ್ಚಂದ್ರ ಕೇವಲ ಒಬ್ಬ ರಾಜನಾಗಿ ಕಾಣಿಸದೆ 'ಸತ್ಯವೆಂಬದೇ ಹರ, ಹರನೆಂಬುದೇ ಸತ್ಯ'ವೆಂದು ನಂಬಿದವನು, 'ಸತ್ಯ ಶಿವ ಸುಂದರ' ಗಳ ಸಮನ್ವಯದ ಪ್ರತೀಕವಾಗಿ ಕಾಣಿಸುತ್ತಾನೆ. ಆದ್ದರಿಂದಲೇ ಅವನ ಮೇಲೆ ಕಾವ್ಯ ರಚಿಸುತ್ತಾನೆ.

ಅವನಲ್ಲಿ ಸತ್ಯನಿಷ್ಠೆ, ಸತ್ಯಪ್ರೀತಿ ಎಷ್ಟೇ ಗಾಢವಾಗಿದ್ದರೂ ಅದು ಲೋಕ ಪ್ರಕಾಶನವಾಗಲು ಒಂದು ನಿಮಿತ್ತದ ಅನಿವಾರ್ಯತೆ ಬೇಕಾಗುತ್ತದೆ. ಅದು ವಿಶ್ವಾಮಿತ್ರ, ಕೌಶಿಕ ರೂಪದಲ್ಲಿ ಕಾಣಿಸಿಕೊಂಡು, ಹರಿಶ್ಚಂದ್ರನ ಸತ್ಯ ಪ್ರೀತಿ ಬೆಳಕಿಗೆ ಬರುವಂತೆ ಮಾಡುತ್ತದೆ. ವಸಿಷ್ಠ, ವಿಶ್ವಾಮಿತ್ರರ ಸೆಣಸಾಟ, ಸತ್ಯಪ್ರೇಮ, ಸತ್ಯ ನಿಷ್ಠ ಇಕ್ಷ್ವಾಕು ವಂಶದ ಹರಿಶ್ಚಂದ್ರನೇ ಎಂಬ ವಸಿಷ್ಠರ ನಂಬಿಕೆ, ಆ ನಂಬಿಕೆಯನ್ನು ಸುಳ್ಳಾಗಿಸುವೆನೆಂಬ ವಿಶ್ವಾಮಿತ್ರನ ಹಠ ಇತ್ಯಾದಿ ಅಂಶಗಳು ಒಟ್ಟಾರೆಯಾಗಿ ಹರಿಶ್ಚಂದ್ರನ ಬದುಕಿನಲ್ಲಿ ಅಸಹನೀಯವಾದ ಸ್ಥಿತ್ಯಂತರಗಳು ತಲೆದೋರಲು ಕಾರಣವಾಗುತ್ತವೆ. ಪ್ರಜಾ ವತ್ಸಲ, ಪ್ರಜಾನುರಾಗಿ, ಸತ್ಯಸಂಧ, ಉದಾರಿ, ದಾನಶೀಲ ಶೌರ್ಯ ಪರಾಕ್ರಮಾಲಂಕೃತ ಇತ್ಯಾದಿಯಾಗಿ ಹೊಗಳಿಸಿಕೊಂಡು ನೆಮ್ಮದಿಯಿಂದ ರಾಜ್ಯಭಾರ ಮಾಡುತ್ತಿದ್ದವನ ಬದುಕಿನಲ್ಲಿ ಪ್ರಚಂಡ ಬಿರುಗಾಳಿಯೇಳುತ್ತದೆ. ಕಷ್ಟ ಪರಂಪರೆ ಪ್ರಾರಂಭವಾಗುತ್ತದೆ. ಅನೇಕ ಬಗೆಯ ದಿವ್ಯಗಳು ಎದುರಾಗುತ್ತವೆ. ವಿಶ್ವಾಮಿತ್ರ ಅಥವಾ ಕೌಶಿಕನ ಕೈವಾಡವೇ ಅದೃಶ್ಯ ರೂಪದ ವಿಧಿಯಾಗಿ ಪರಿಣಮಿಸುತ್ತದೆ. ಹಲವು ರೀತಿಗಳಲ್ಲಿ 'ಕೌಶಿಕ ಶಕ್ತಿ ಕಾಡಲು ಆರಂಭಿಸುತ್ತದೆ. ವಸಿಷ್ಟ ವಿಶ್ವಾಮಿತ್ರರ ಸೆಣಸಾಟದಲ್ಲಿ "ಕೋಣನೆರಡುಂ ಹೋರೆ ಗಿಡುವಿಂಗೆ ಮಿತ್ತು" ಎಂಬಂತೆ ಹರಿಶ್ಚಂದ್ರ ಸಿಲುಕಿ ನರಳುತ್ತಾನೆ. ತನ್ನ ಶಿಷ್ಯನನ್ನು ರಕ್ಷಿಸಬೇಕೆಂಬ ಪ್ರಯತ್ನಗಳು ವಸಿಷ್ಠರ ಮುನ್ನೆಚ್ಚರಿಕೆಗಳೂ ಹರಿಶ್ಚಂದ್ರನನ್ನು ರಕ್ಷಿಸುವಲ್ಲಿ ಸೋಲುತ್ತವೆ. ಕಾಪಾಡುವ ಕೈಗಳಿಗಿಂತ ಕಾಡುವ ಕೈಗಳದೇ ಮೇಲುಗೈಯಾಗುತ್ತದೆ. ವಿಶ್ವಾಮಿತ್ರ ತನ್ನ ಮಂತ್ರಶಕ್ತಿಯಿಂದ ಕೃತಕವೂ ಸಂಕೀರ್ಣವೂ ಆದ ಸನ್ನಿವೇಶಗಳನ್ನು ಸೃಷ್ಟಿಸುತ್ತಾ ಹೋಗುತ್ತಾನೆ. ಮೃಗಯಾಸಂಮೋದ ಅನಿರೀಕ್ಷಿತವಾಗಿ ಉಂಟಾದ

ಕ್ಷಾಮದಿಂದ ತತ್ತರಿಸಿ ಹೋಗುತ್ತಾರೆ. ಕಾಡು ಪ್ರಾಣಿಗಳು, ಇಲಿ ಹೆಗ್ಗಣಗಳು ಪಶು ಪಕ್ಷಿಗಳು, ಬೆಳೆದು ಫಸಲಿಗೆ ನಿಂತ ಬೆಳೆಗಳನ್ನು ಹಾಳುಮಾಡುವುದರ ಮೂಲಕ ಉಂಟಾದ ಕ್ಷಾಮ ನಿವಾರಣೆಗೆ ಬೇಟೆಯಾಡಿ ಕೊಲ್ಲುವುದೊಂದೇ ದಾರಿ ಎನಿಸಿ, ಹರಿಶ್ಚಂದ್ರ ಬೇಟೆಗೆ ಸಜ್ಜಾಗುತ್ತಾನೆ. ಎಲ್ಲಕ್ಕಿಂತ ಭಯಂಕರವಾಗಿ ಕಾಡು ಹಂದಿಯ ಉತ್ಪಾತ ಸಹಿಸಲಸಾಧ್ಯವೆನಿಸುತ್ತದೆ. ಅದನ್ನು ಹೇಗಾದರೂ ಹಿಡಿದು ಬೇಟೆಯಾಡಿ ಕೊಲ್ಲ ಬೇಕೆಂದವನನ್ನು ಹಂದಿ ಕಣ್ಣು ಮುಚ್ಚಾಲೆಯಾಡಿಸಿ ವಿಶ್ವಾಮಿತ್ರನ ಆಶ್ರಮ ಪ್ರಾಂತ್ಯಕ್ಕೆ ಕರೆದೊಯ್ಯುತ್ತದೆ. ಹರಿಶ್ಚಂದ್ರ ತನಗರಿವಿಲ್ಲದಂತೆಯೇ ವಸಿಷ್ಠ ಗುರುಗಳ ಮಾತನ್ನು ಅತಿಕ್ರಮಿಸಿದಂತಾಗುತ್ತದೆ. ತಾನು ಕಳಿಸಿದ ಹಂದಿಗಾದ ಗತಿಯಿಂದ ಕ್ಷುಬ್ಧನಾದ ವಿಶ್ವಾಮಿತ್ರ ತನ್ನ ತಾಮಸ ವೃತ್ತಿಯಾದ ಕೋಪದ ಕ್ಷಣಗಳಲ್ಲಿ, ಕನ್ನೆಯರಿಬ್ಬರನ್ನು ಸೃಷ್ಟಿಸಿ ಹರಿಶ್ಚಂದ್ರನೆಡೆಗೆ ಕಳಿಸಿ ಸತ್ಯಭ್ರಷ್ಟತೆಗೆ ಪ್ರಯತ್ನಿಸುವಂತೆ ತಿಳಿಸುತ್ತಾನೆ.

ದುಃಸ್ವಪ್ನ, ಬೇಟೆಯ ಆಸರು, ವಿಶ್ವಾಮಿತ್ರನ ಆಶ್ರಮ ಪ್ರವೇಶದ ಭೀತಿಗಳನ್ನು ಮರೆಸಲೋ ಎಂಬಂತೆ ಹೊಲತಿಯರು ತಮ್ಮ ಅಂದ, ಚೆಂದ, ಗಾನ, ನರ್ತನಗಳಿಂದ ರಂಜಿಸಿದಾಗ, ಅವರ ಗಾನ ನಾಟ್ಯಗಳ ಸೊಗಸಿಗೆ ಮೆಚ್ಚಿ ಸರ್ವಾಭರಣ ಕಾಣಿಕೆ ನೀಡಲು ಅವರು ಅವುಗಳನ್ನು ಧಿಕ್ಕರಿಸಿ. ತಮ್ಮನ್ನು ಮದುವೆಯಾಗಲು ಹಲವು ತರ್ಕಗಳಿಂದ ಒತ್ತಾಯಿಸುತ್ತಾರೆ. ಆದರೆ ತನ್ನಂತಹ ಶ್ರೇಷ್ಠಕುಲ ತಿಲಕನಿಗೆ ರಾಜಾಧಿ ರಾಜರೇ ತಮ್ಮ ಮಕ್ಕಳನ್ನು ಕೊಡಲು ಕೇಳುವುದು ಹೇಗೆಂದು ಹೆದರುವಾಗ ಹೊಲತಿಯರು ತನ್ನನ್ನು ವಲ್ಲಭನಾಗೆಂದು ಬೇಡುತ್ತಿರುವುದು ನಿಜವಾಗಿಯೂ ಕಾಲದ ವಿಪರ್ಯಾಸವೆನಿಸುತ್ತದೆ. ಗಾನ ರಾಣಿಯರ ತರ್ಕವೇ ಬೇರೆ ! ಹಾಲು ಕೊಡುವ ಕೆಚ್ಚಲಿಗೆ, ಎಂಜಲಾಗಿ ಜೇನುತುಪ್ಪ ನೀಡುವ ಜೇನ್ನೊಣಗಳಿಗೆ, ಕಸ್ತೂರಿ ಕೊಡುವ ಕಸ್ತೂರಿ ಮೃಗಕ್ಕೆ, ತಮ್ಮ ಸಂಗೀತವಾಲಿಸಿದ ಕಿವಿಗಳಿಗೆ, ನರ್ತನ ನೋಡಿದ ಕಣ್ಣುಗಳಿಗೆ, ಹೊಗಳಿದ ಬಾಯಿಗೆ ಮಡಿಯಿಲ್ಲ. ಆದರೆ ತಮ್ಮನ್ನು ಮದುವೆಯಾಗಲು ಮಾತ್ರ ಹೊಲೆತನ ಅಡ್ಡಿಯಾಗುವುದಾದರೂ ಹೇಗೆ ? ಎಂಬುದೆ ಅವರ ಪ್ರಶ್ನೆ. ಯಾವುದಕ್ಕೂ ಮಣಿಯದೆ ಹಠ ಮಾಡುವ ಹೊಲತಿಯರಿಗೆ ಕಡೆಗೆ ದಂಡ ಪ್ರಯೋಗ ಮಾಡಿ ವಿಶ್ವಾಮಿತ್ರನ ಕ್ರೋಧವನ್ನು ಆಹ್ವಾನಿಸಿಕೊಳ್ಳುತ್ತಾನೆ. ಸಮಯಕ್ಕೆಂದೇ ಕಾದಿದ್ದ ವಿಶ್ವಾಮಿತ್ರ,

ತನ್ನ ಮಕ್ಕಳನ್ನು ಮದುವೆಯಾಗಬೇಕು ಅಲ್ಲವೆ ರಾಜೈಶ್ವರ್ಯ ಸಮಸ್ತವನ್ನೂ ದಾನವಾಗಿ ಕೊಡಬೇಕೆಂದು ಷರತ್ತು ಒಡ್ಡುತ್ತಾನೆ. ಹರಿಶ್ಚಂದ್ರ ಎರಡರಲ್ಲಿ ರಾಜ್ಯ ಸರ್ವಸ್ವ ದಾನವನ್ನೇ ಆಯ್ಕೆ ಮಾಡಿಕೊಳ್ಳುತ್ತಾನೆ.

ರಾಜ್ಯ, ಸಿರಿಸಂಪತ್ತುಗಳ ಬಗೆಗಿನ ಪ್ರೀತಿ, ಮೋಹಗಳು ಯಾವ ಮನುಷ್ಯನ ಮನಸ್ಸನ್ನೂ ದುರ್ಬಲಗೊಳಿಸುತ್ತದೆ, ಚಂಚಲಗೊಳಿಸುತ್ತದೆ ಎನ್ನುವ ಸಾಮಾನ್ಯ ನಂಬಿಕೆಗೆ ಬಿದ್ದುದರಿಂದ, ಹರಿಶ್ಚಂದ್ರನನ್ನು ತನ್ನ ಸಮಸ್ತ ಪ್ರಜಾ ಸಮಕ್ಷಮದಲ್ಲಿ ಎಲ್ಲವನ್ನೂ ಒಂದೊಂದಾಗಿ ಒಪ್ಪಿಸಿ ಕೊಡಬೇಕೆಂದು ಹೇಳುತ್ತಾನೆ.ಒಂದೊಂದನ್ನು ಒಪ್ಪಿಸಿಕೊಡುವಾಗ ಯಾವುದಾದರೂ ಒಂದು ಕ್ಷಣದಲ್ಲಿ ಅವನು ಮಾತು ತಪ್ಪಿ ರಾಜ್ಯ ಮೋಹದ ಸೆಳತಕ್ಕೆ ಒಳಗಾದಾನೆಂಬ ಲೆಕ್ಕಾಚಾರ, ಈ ಷರತ್ತನ್ನು ಮುಂದೊಡ್ಡುತ್ತದೆ. ಆದರೆ ಹರಿಶ್ಚಂದ್ರನ ಸತ್ಯಪ್ರೀತಿ, ಸತ್ಯನಿಷ್ಠೆ ಭದ್ರಕೋಟೆಯಾಗಿ ಅವನ ಅಂತರ್ಯವನ್ನು ಕಲಕುವುದಿಲ್ಲ. ನಿಸ್ಪೃಹತೆಯಿಂದ, ದೃಢ ಮನಸ್ಸಿನಿಂದ ಸಕಲವನ್ನೂ (ರಾಜ್ಯಕೋಶ, ಚತುರಂಗ ಬಲ, ಪರಿಜನ, ಪರಿವಾರ, ಲಲನೆಯರು, ಕೋಟೆ ಕೊತ್ತಲಗಳನ್ನು ಧಾರೆಯೆರೆದು ಕೊಡುತ್ತಾನೆ, ದಾನವಾಗಿ ಅರ್ಪಿಸುತ್ತಾನೆ ಆದರೆ ದಕ್ಷಿಣೆಯನ್ನು ಸಾಲವಾಗಿ ಉಳಿಸಿಕೊಂಡು, ಒಂದಷ್ಟು ಗಡುವು ತೆಗೆದುಕೊಂಡು ಮಡದಿ,ಮಗ ಮಂತ್ರಿ ಸಹಿತ ದೇಶಾಂತರ ಹೋಗುತ್ತಾನೆ. ಆದರೆ ಮುಂದಿನ ಬದುಕೂ ಅವನಿಗೆ ಸರಳವಾಗುವುದಿಲ್ಲ. ತನ್ನ ಶಿಷ್ಯರಲ್ಲಿಯೇ ಹುಸಿ, ಅಸೂಯ, ನೀಚವೃತ್ತಿ, ನಿರ್ದಾಕ್ಷಣ್ಯ, ನಿಷ್ಕರುಣ ನೀತಿಗಳಲ್ಲಿ ಹೆಸರಾದ ನಕ್ಷತ್ರಕನೆಂಬುವನನ್ನು ಹುಡುಕಿ ತೆಗೆದು, ಏಕಾಂತದಲ್ಲಿ ಅವನಿಗೆ ದುರ್ಬೋಧೆಗಳನ್ನು ಮಾಡಿ, ಹೇಗಾದರೂ ಹರಿಶ್ಚಂದ್ರ ಕೊಟ್ಟ ಮಾತನ್ನು, ಸತ್ಯವನ್ನು ಮೀರುವಂತಹ ರೀತಿಯಲ್ಲಿ ಹಿಂಸಿಸಲು ಆದೇಶಿಸುತ್ತಾನೆ.

ನಕ್ಷತ್ರಕನ ಹಿಂಸೆ, ವಚನಬದ್ಧತೆಗಳಿಗಾಗಿ ತನ್ನನ್ನು ತನ್ನ ಮಡದಿಯನ್ನು ಮಾರಿಕೊಳ್ಳಬೇಕಾಗುತ್ತದೆ. ತನ್ನನ್ನು ಕೊಂಡ ಒಡೆಯ ಸ್ಮಶಾನದ ಕಾವಲುಗಾರ. ಅವನಲ್ಲಿ ಸೇರಿ ತಾನು ಸ್ಮಶಾನ ಕಾಯುವ ಕಾಯಕದಲ್ಲಿ ನಿಷ್ಠೆಯಿಂದ ತೊಡಗಿಸಿಕೊಂಡು, ಒಡೆಯನ ಸೇವೆಯನ್ನು ಮಾಡುತ್ತಾನೆ. ಮಡದಿ ಚಂದ್ರಮತಿ ತನ್ನನ್ನು ಕೊಂಡ ಬ್ರಾಹ್ಮಣನಲ್ಲಿ

ತೊತ್ತಾಗಿ ದುಡಿಯುತ್ತ ಅವನ ಮೂದಲಿಕೆ, ಕ್ರೌರ್ಯಗಳ ಹಿಂಸೆಯನ್ನು ನುಂಗಿಕೊಂಡು ಬದುಕಲು ಕಲಿಯುತ್ತಿರುವಾಗಲೇ ಸರ್ಪದಂಷ್ಟ್ರದಿಂದ ಮಗನ ಸಾವು ಎದುರಾಗುತ್ತದೆ. ಅವನ ನಿರೀಕ್ಷೆಯಲ್ಲಿದ್ದವಳಿಗೆ ಅವನ ಸಾವಿನ ಸುದ್ದಿ ತಲುಪುತ್ತದೆ. ಕತ್ತಲ ರಾತ್ರಿಯಲ್ಲಿ ಮಗನ ಶವವನ್ನು ಹುಡುಕಿಕೊಂಡು ಹೋಗಲು ಯಜಮಾನನ ನಿಷ್ಠುರ ವಾಕ್ಯಗಳನ್ನು ಕೇಳಬೇಕಾಗುತ್ತದೆ. ಅದನ್ನೂ ಸಹಿಸಿಕೊಂಡು ಹೊರಟವಳಿಗೆ ಶವ ದೊರೆಯುವುದಾದರೂ ಶವ ಸಂಸ್ಕಾರ ಸಮಸ್ಯೆಯಾಗುತ್ತದೆ. ಮಸಣವಾಡಗೆಯ ಹಾಗ, ಹಣ ಉಟ್ಟುದನ್ನು ಕೊಟ್ಟಲ್ಲದೆ ಸಂಸ್ಕಾರ ಸಾಧ್ಯವಿಲ್ಲವೆಂದು ನುಡಿದವನಿಗೆ, ತನ್ನ ಅಸಹಾಯಕತೆ, ಹಣತರಲು ಅಸಮರ್ಥತೆಗಳು ಅರ್ಥವಾಗುವುದಿಲ್ಲ. ಕೊರಳ ಮಾಂಗಲ್ಯವನ್ನೇ ಮಾರಿ ಹಣ ತರಲು ಆದೇಶಿಸುತ್ತಾನೆ. ತನ್ನ ಪೂರ್ವಸ್ಥಿತಿಯನ್ನು ನೆನಪಿಸಿಕೊಂಡು ತನ್ನ ಇಂದಿನ ಸ್ಥಿತಿಗಾಗಿ ಅನಾಥವಾಗಿ ಸತ್ತು ಸಂಸ್ಕಾರಕ್ಕೂ ಅವಕಾಶವಿಲ್ಲದ ಮಗನ ದುರದೃಷ್ಟಕ್ಕಾಗಿ ಹಲುಬಿದ ಚಂದ್ರಮತಿಯ ಗುರುತು ಹತ್ತಿದರೂ, ವಿಶ್ವಾಮಿತ್ರನ ಮತ್ತೊಂದು ದಿವ್ಯವೆಂದು ಮರುಗಿದನೇ ಹೊರತಾಗಿ ಸಹಾಯಕ್ಕೆ ಮುಂದಾಗಲಿಲ್ಲ. ಒಡೆಯನಿಗೆ ವಂಚಿಸಿ, ಅಗ್ನಿ ಸಂಸ್ಕಾರಕ್ಕೆ ಅವಕಾಶವೀಯಲಿಲ್ಲ. ಎಂತಹ ದುರದೃಷ್ಟ ಪ್ರಸಂಗಗಳಲ್ಲಿಯೇ ಆಗಲಿ, ಅವಗಢಗಳೇ ಎದುರಾಗಲಿ ‘ಸತ್ಯ’ಕ್ಕೆ ಎಂದೂ ಚ್ಯುತಿ ಬಾರದಂತೆ ನಡೆದುಕೊಳ್ಳುವುದನ್ನೇ ತನ್ನ ಬದುಕಿನ ನೇಮವಾಗಿಸಿಕೊಂಡಿದ್ದ. ಅದನ್ನೇ ತಪಸ್ಸನ್ನಾಗಿ ಭಾವಿಸಿದ್ದ. ಆದ್ದರಿಂದಲೇ ಅವಳಾರೆಂಬುದು ತಿಳಿದರೂ ಸಡಿಲಾಗದೆ, ಅವಳಿಂದ ಕೊಡಬೇಕಾದ ತೆರವನ್ನು ನಿರೀಕ್ಷಿಸುತ್ತಾನೆ. ಚಂದ್ರಮತಿಗಾದಷ್ಟೇ ಮಗನ ಸಾವಿನ ದುಃಖ ಅವನಿಗೂ ಆಗುತ್ತದೆ. ಹೆಣದ ಮೇಲೆ ಬಿದ್ದು ಅಳುತ್ತಾನೆ. ತನ್ನ ಮಗನಾದುದಕ್ಕೆ ಅನುಭವಿಸಬೇಕಾಗಿ ಬಂದ ಸಂಕಷ್ಟಗಳಿಗೆ ಮರುಗುತ್ತಾನೆ. ಮುಗಿಲು ಮುಟ್ಟುವಂತೆ ಈ ಇಬ್ಬರ, ಹೆತ್ತ ಮನಸ್ಸುಗಳು ವಿಲಪಿಸುತ್ತವೆ. ಆದರೆ ಒಡೆಯನಿಗೆ ಸಲ್ಲಬೇಕಾದುದರಲ್ಲಿ ಯಾವ ರಿಯಾಯಿತಿಯೂ ಇಲ್ಲ, "ಉಳ್ಳೊಡೆ ಕೊಡಿಲ್ಲವೊಡೆ ಬೇಗದಿ ಹೋಗಿ ನಿನ್ನೊಡೆಯನಂ ಬೇಡಿ ತಾ! ತಾರದಿರೆ ಸುಡಲೀಯೆ" ,ಎಂದು ನಿರ್ದಾಕ್ಷಿಣ್ಯವಾಗಿ ನುಡಿಯುತ್ತಾನೆ. ವಿಧಿಯಿಲ್ಲದೆ ಒಡೆಯನಲ್ಲಿ ಬೇಡಿ ತರಲು ಹೊರಟ ಚಂದ್ರಮತಿ, ‘ವಿಧಿ

ಸುರಿಯೆ ಕಷ್ಟಗಳ ಮಳೆ' ಎಂಬಂತೆ ಮತ್ತೆ ಕೌಶಿಕನ ಕಾಟಕ್ಕೆ ಗುರಿಯಾಗಿ ಕೊಲೆಯ ಆರೋಪದ ಮೇಲೆ ಸೆರೆಯಾಗುತ್ತಾಳೆ. ಅರಸನ ಮಗನನ್ನು ಕೊಂದವಳೆಂದು ವಿಚಾರಣೆಯಾಗಿ ಅಪರಾಧಿಯೆಂದು ನಿರ್ಧರಿಸುತ್ತಾರೆ. ಕೊಲೆಗೂ ತನಗೂ ಯಾವ ಸಂಬಂಧವಿಲ್ಲದಿದ್ದರೂ ರಾಜನ ಕೋಪ, ತನ್ನ ಹತಾಶ ಸ್ಥಿತಿಗೆ ಬೇಸತ್ತು ತಾನೇ ಅರಸನ ಮಗನನ್ನು ಕದ್ದೊಯ್ದು ಹಣದಾಸೆಯಿಂದ ಕೊಂದೆನೆಂದು ಹೇಳಿದರೂ ಅರಸನಿಗೆ ನಂಬಿಕೆಯಾಗದೆ, ಯಾರದೋ ಒತ್ತಾಯಕ್ಕೆ ಸಿಕ್ಕಿ ಹೇಳುತ್ತಿರುವೆಯಾದರೆ, ಭಯ, ಅಂಜಿಕೆಗಳಿಲ್ಲದೆ ಸತ್ಯವನ್ನು ನುಡಿದಲ್ಲಿ ರಕ್ಷಿಸುವೆನೆಂಬ ಭರವಸೆಯಿತ್ತರೂ ಸತ್ತ ಶಿಶು ಕೈಲಿರುವುದನ್ನು ಪ್ರತ್ಯಕ್ಷವಾಗಿ ನೋಡುತ್ತಿರುವಾಗ ಅದಕ್ಕಿಂತ ಬೇರೆ ಸಾಕ್ಷ್ಯ ಬೇಕೆ? ನಾನು ಅಪರಾಧಿಯೇ ಹೌದು. ನನಗೆ ಶಿಕ್ಷೆ ವಿಧಿ ಸೆಂದು ಬೇಡಿಕೊಳ್ಳಲು ವಿಧಿಯಿಲ್ಲದೆ ಶಿರಚ್ಛೇದದ ಆಜ್ಞೆಯಾಗುತ್ತದೆ. ವಿಧಿ ವಿಪರ್ಯಾಸವೆಂಬಂತೆ ಅವಳ ತಲೆಗೆಡವ ಹೊಣೆಗಾರಿಕೆ ಮತ್ತೆ ಸುಡಗಾಡ ಕಾವಲ ಹರಿಶ್ಚಂದ್ರನ ಮೇಲೇ ಬೀಳುತ್ತದೆ. ಕಡೆಯ ಕ್ಷಣದ ಅವಳ ಹಾರೈಕೆ ಪ್ರಾರ್ಥನೆಗಳು ಅವನನ್ನು ವಿಚಲಿತನನ್ನಾಗಿಸಿದರೂ ಕ್ಷಣಾರ್ಧದಲ್ಲಿ ಚೇತರಿಸಿಕೊಂಡು 'ಪತಿಯಾಜ್ಞೆಯುಳದಡೆ ಸಾಕು. ನಾನು ಹೇವರಿಸುವವನಲ್ಲ' ಎಂದುಕೊಂಡು ಕೊಲ್ಲಲು ಅನುವಾದ ಕ್ಷಣದಲ್ಲಿ, ಮತ್ತೆ ವಿಶ್ವಾಮಿತ್ರ ಅವನಿಗೆ ಮುಖಾಮುಖಿಯಾಗಿ ಬಂದು ನಿಲ್ಲುತ್ತಾನೆ. ಅವನ ದೃಷ್ಟಿಯಲ್ಲಿ ಇದು ಹರಿಶ್ಚಂದ್ರನ ಅತ್ಯಂತ ಅಸಹಾಯಕ ಸ್ಥಿತಿ. ಕಷ್ಟ ಕಾರ್ಪಣ್ಯಗಳ ಪರಾಕಾಷ್ಠೆ ಇದೇ ಹದವಾದ ಮಿದುವಾದ ಸಂದರ್ಭ. ಸುಲಭವಾಗಿ ತನ್ನ ಆಮಿಷಗಳಿಗೆ ಬಲಿಯಾಗುತ್ತಾನೆಂದು ಭಾವಿಸಿ, ತನ್ನ ಮಕ್ಕಳನ್ನು ಮದುವೆಯಾಗುವುದಾದರೆ, ಈಗಲೂ ಅವನ ಸಮಸ್ತ ರಾಜ್ಯವನ್ನು ಅವನಿಗೆ ಹಿಂತಿರುಗಿಸಿ, ಬಂದ ಕಷ್ಟಗಳೆಲ್ಲವನ್ನೂ ಪರಿಹರಿಸುವುದಾಗಿ ಭರವಸೆ ನುಡಿಯುತ್ತಾನೆ. ಆದರೆ ಈ ಹಂತದವರೆಗೆ ಬಂದು ತಲುಪಿದ ಹರಿಶ್ಚಂದ್ರ, ರಾಜ್ಯ ಸುಖ, ಸಂಪತ್ತುಗಳನ್ನು ತನ್ನ ಸತ್ಯ ಪ್ರೀತಿಯೊಂದಿಗೆ ವಿನಿಮಯ ಮಾಡಿಕೊಳ್ಳಲಾರ 'ಸತ್ಯ' ವೆಂಬ ಮೌಲ್ಯದ ಮುಂದೆ ಈ ಭೌತಿಕ ಸುಖವೆಲ್ಲವೂ ಕ್ಷುಲ್ಲಕ, ಆದ್ದರಿಂದಲೇ ರಾಜ್ಯ ಹೋಗಲಿ, ಮಡದಿ ಮಕ್ಕಳು ಇಲ್ಲವಾಗಲೀ, 'ಸತ್ಯವನ್ನು ಬಿಟ್ಟಿರಲಾರ' ನೆಂಬುದು ಉಳಿದರೆ ಸಾಕೆಂದು ಖಡ್ಗವೆತ್ತಿ ಹೊಡೆಯುತ್ತಾನಾದರೂ

ಖಡ್ಗಬಾಯಿಗೆ ಚಂದ್ರಮತಿ ತಲೆ ಬಲಿಯಾಗುವುದಿಲ್ಲ. ಬದಲಾಗಿ 'ಹರರೂಪಿ ಸತ್ಯ, ಸತ್ಯರೂಪಿ ಹರ' ಪ್ರತ್ಯಕ್ಷನಾಗುತ್ತಾನೆ. ಜಗತ್ತಿಗೆ 'ಹರನೆಂಬುದೇ ಸತ್ಯ, ಸತ್ಯವೆಂಬುದೇ ಹರ' ಎಂಬ 'ತಾತ್ವಿಕ ಚಿಂತನೆ'ಯ ಸಾಕ್ಷಾತ್ಕಾರವಾಗುತ್ತದೆ.

ಹೀಗೆ ಜೀವನದಲ್ಲಿ ಅನುಪಮ ಮೌಲ್ಯಗಳನ್ನು ರೂಢಿಸಿಕೊಂಡು, ಆಳವಡಿಸಿಕೊಂಡು ವೈಯುಕ್ತಿಕ ಸುಖವನ್ನೂ, ಪ್ರಾಣವನ್ನೂ ಪಣವಾಗಿ ಒಡ್ಡಿ ನಿಂತ ಮಹಾ ಮಾನವ ಚೇತನರು ನಮ್ಮ ಸಾಂಸ್ಕೃತಿಕ ಪರಂಪರೆಯಲ್ಲಿ ಹಲವರು ಇದ್ದಾರೆ. ಆದರ್ಶಗಳಿಗಾಗಿ, ಮೌಲ್ಯಗಳಿಗಾಗಿ, ಪ್ರೀತಿ ಸಂಬಂಧಗಳಿಗಾಗಿ ಆತ್ಮಾರ್ಪಣ ಮಾಡಿಕೊಳ್ಳುವ ಭವ್ಯ ಪರಂಪರೆ ನಮ್ಮದಾಗಿದೆ.

★ ★ ★

ಸೆಲೆ - ೯

# ಕೋಮಳ ಬಾಹುಪಾಶಂಗಳೇ ಯಮಪಾಶಂಗಳಾಗೆ.

ಪ್ರೀತಿಯ ಬಗ್ಗೆ ಮಾತಾಡುವಾಗಲೆಲ್ಲ ನಮಗೆ ತಟ್ಟನೆ ಹೆಣ್ಣು ಗಂಡುಗಳ ಸಂಬಂಧ ಹಲವು ಬಗೆಯ ಪ್ರೀತಿಯಲ್ಲಿ ಹೆಣ್ಣು ಗಂಡಿನ ಪ್ರೀತಿಯ ಬಗ್ಗಯೇ ಎಲ್ಲ ಕವಿ, ಕಲಾವಿದರ ಕಲ್ಪನೆಗಳು ರಂಗೇರುವುದು ಕಾಣಿಸುತ್ತದೆ. ಈ ಸಂಬಂಧದ ಓಸ್ಲೆಯಲ್ಲಿ ಹೇಳುವುದಕ್ಕೆ ಬೇಕಾದಷ್ಟು ಸಾಮಗ್ರಿ ದೊರೆಯುತ್ತದೆ. ಜಗತ್ತಿನ ಆಗುಹೋಗುಗಳೆಲ್ಲಕ್ಕೂ ಹೆಣ್ಣು ಗಂಡಿನ ಪ್ರೀತಿಯೇ ಮೂಲ. ನಮ್ಮ ಮಹಾಕಾವ್ಯಗಳ ಹೃದಯ ಕೇಂದ್ರದಲ್ಲಿರುವುದೂ ಹೆಣ್ಣು ಗಂಡು ಸಂಬಂಧ ಮೂಲದಿಂದ ಹುಟ್ಟಿಕೊಂಡ ಸನ್ನಿವೇಶಗಳೇ ! ಪತಿವ್ರತೆಯರೆಂದು ಪರಿಗಣಿತರಾದ ಸೀತೆ, ದ್ರೌಪದಿಯರ ವಿಚಾರದಲ್ಲಿ ಪರಪುರುಷರು ಪ್ರೀತಿಸಿ ನಡೆದುಕೊಂಡ ರೀತಿಯಿಂದಲೇ ಸಮಸ್ಯೆಗಳು ಉದ್ಭವಿಸಿದ್ದು.

ಹೆಣ್ಣು-ಗಂಡು ಸಂಬಂಧ ದಾಂಪತ್ಯ ರೇಖೆಯ ಒಳಗಿನದಾಗಿರಬಹುದು ಇಲ್ಲವೆ ಪ್ರಣಯ ಪರಿವೇಶದೊಂದಿಗೇ ಇರಬಹುದು. ಎಲ್ಲಿಯವರೆಗೆ ಎರಡು ಹೃದಯಗಳನ್ನು ಬೆಸೆದ ಗಾಢ ಪ್ರೀತಿ ಅಭಾದಿತವಾಗಿ ಮುಂದುವರೆಯುತ್ತದೆಯೋ ಅಲ್ಲಿಯವರೆಗೂ ಎಲ್ಲವೂ ಅದ್ಭುತ ಅನುಭೂತಿಯಾಗಿರುತ್ತದೆ. ವರ್ಣರಂಜಿತವಾಗಿರುತ್ತದೆ. ಸ್ವರ್ಗಕ್ಕೂ ಕಿಚ್ಚು ಹಚ್ಚು ಎನ್ನುವ ನಿಲುವಿನಲ್ಲಿ, ಭೂಮಿಯ ಮೇಲಿನ ಪ್ರೀತಿಯ ಸುಖ ಅಷ್ಟು ಆಪ್ತವೂ ಆಮೋದಕರವೂ ಆಗಿರುತ್ತದೆ. ಆದರೆ ಇಂತಹ ಗಾಢ, ಅನನ್ಯ ಪ್ರೀತಿಯ ಎಳೆಯೊಂದಿಗೆ ಬೆಸೆದುಕೊಂಡಿರುವ ಎರಡು ಜೀವಿಗಳಲ್ಲಿ, ಸಮಾಜದಿಂದಲೋ, ವ್ಯಕ್ತಿಗಳಿಂದಲೋ, ವಿಧಿ ವಂಚನೆಯಿಂದಲೋ ಏನಾದರೂ ಎಡವಟ್ಟಾಗಿ, ಅಡಚಣೆಯುಂಟಾಗಿ, ಪ್ರೀತಿಸುವವರಲ್ಲಿ ಒಬ್ಬರಿಗೆ ತೊಂದರೆಯಾದರೆ, ಉಳಿದು ಬದುಕುವ ಜೀವಿಯ ಆರ್ತತೆ, ಅಳಲು, ದುಃಖ, ದುಗುಡಗಳು ಅವರ್ಣನೀಯವಾಗಿರುತ್ತವೆ. ಹೃದಯ ಒಡೆಯುವಷ್ಟು ವೇದನೆಯೆನಿಸುತ್ತದೆ.

ರಾಮಾಯಣದಂತಹ ಮಹಾಕಾವ್ಯದ ನಾಂದಿಗೆ ಕ್ರೌಂಚ ಮಿಥುನಗಳಲ್ಲಿ ಒಂದರ ಸಾವಿನಿಂದಾಗಿ ಮತ್ತೊಂದು ಕ್ರೌಂಚ ಅನುಭವಿಸಿದ ತೀವ್ರ ವೇದನೆ, ಶೋಕಗಳೇ ಕಾರಣವಾದವು.

ಅತಿಯಾದ ಪ್ರೀತಿಯ ಎದೆಯಾಳದಲ್ಲಿ, ವಿರಹ ರೂಪದ ನೋವು ಸಾವಿನಗಲಿಕೆಯಿಂದಾದ ದುಃಖ, ಪ್ರೀತಿವಂಚನೆಯ ಆಘಾತದಿಂದ ಉಂಟಾಗುವ ವೇದನೆ, ಪರಿತಾಪಗಳು ಸುಪ್ತವಾಗಿರುತ್ತವೆ.

ವ್ಯಾಸರು ಬರೆದ ಮಹಾಭಾರತ ಮುಂದೆ ಬಂದ ಅನೇಕ ಕನ್ನಡ ಕವಿಗಳನ್ನು ಪ್ರಭಾವಿಸಿತು. ಅಲ್ಲಿ ಬರುವ ಮನುಜ ಲೋಕದ ಸ್ವಭಾವ ವೈವಿಧ್ಯ, ಕಲ್ಪನೆಗೂ ಮೀರಿದ ವಿಶಾಲವಾದ ಭಾವ ಜಗತ್ತು, ಧರ್ಮ, ಅರ್ಥ, ಕಾಮ, ಮೋಕ್ಷಗಳಿಗಾಗಿ ನಡೆಯುವ ಸಂಘರ್ಷ (ಭೌತಿಕ, ಮಾನಸಿಕ) ಇತ್ಯಾದಿಗಳಿಂದ ಪ್ರಭಾವಿತರಾಗಿ ಜೈನನಾದರೂ ಪಂಪ, ಮತ್ತು ಸ್ವತಃ ಭಾಗವತ ಕವಿಯಾದ ಕುಮಾರವ್ಯಾಸ ಭಾರತ ಕಥಾವಸ್ತುವನ್ನು ತಮ್ಮ ಕಾವ್ಯಕ್ಕೆ ತೆಗೆದುಕೊಂಡಿದ್ದು ಅವರವರ ವೈಯುಕ್ತಿಕ ಮನೋಧರ್ಮಕ್ಕೆ ತಕ್ಕಂತೆ ಬಗ್ಗಿಸಿಕೊಂಡಿದ್ದರೂ ಮೂಲ ಕಥಾ ಪ್ರಸಂಗಗಳಲ್ಲಿ ಮಾತ್ರ ಸಮಾನತೆಯನ್ನು ತೋರಿದ್ದಾರೆ. ಮಹಾಭಾರತದಲ್ಲಿಯೂ ಬರುವ ಪಾಂಡುವಿನ ಮೃಗಯಾ ವಿನೋದ, ಮೃಗ ರೂಪದಲ್ಲಿದ್ದ ಋಷಿ ದಂಪತಿಗಳನ್ನು ಅವರ ಉತ್ಕಟ ಕಾಮ, ಪ್ರೇಮದ ಕ್ಷಣಗಳಲ್ಲಿ, ಮಾನವರೆಂಬುದನ್ನರಿಯದೆ ಬೇಟೆಯಾಡಿ ಕೊಂದುದರ ಪರಿಣಾಮ ಒದಗಿದ ಶಾಪ, ಶಾಪ ಸಾಕ್ಷಾತ್ಕಾರವಾದುದು ಎಲ್ಲವೂ ಒಂದೇ ರೀತಿಯಲ್ಲಿ ಬಂದಿದೆ.

ಒಂದು ದಿನ ಪಾಂಡು ಮೃಗಯಾ ವಿನೋದಿಯಾಗಿ, ಬೇಟೆಗೆ ಬಯಸಿ ಅಡ್ಡಾಡುತ್ತಿರುವಾಗ ಮುನಿದಂಪತಿಗಳು ಮೃಗ ರೂಪದಲ್ಲಿ ಕೂಡಿ ರತಿ ಸುಖದಲ್ಲಿ ಮೈಮರೆತು ಇರುವಾಗ, ಪಾಂಡುರಾಜ ಅವರ ವೇಷಾಂತರದ ರಹಸ್ಯವರಿಯದೆ ಮೃಗಗಳೆಂದೇ ಭ್ರಮಿಸಿ ಬಾಣ ಹೂಡಿ ಬೇಟೆಯಾಡಲು ಅವನು ಬಿಟ್ಟ ಬಾಣಗಳು ಮುನಿಯ ಕಣ್ಣು ಎದೆಗಳಲ್ಲಿ ನಾಟಲು ಆರ್ತಧ್ವನಿ ಮಾಡುತ್ತ ತಮ್ಮೆದುರು ನಿಂತ ಪಾಂಡುವನ್ನು ನೋಡುತ್ತಾರೆ. ಮುನಿಯ ನೋವು ಕೋಪವಾಗಿ ತಿರುಗುತ್ತದೆ. ತನ್ನಿಂದ

ಎಂತಹ ಆಘಾತವಾಯಿತು, ಮೃಗವೆಂಬ ಭ್ರಮೆಯಲ್ಲಿ ನಾ ಮಾಡಿದಪರಾಧಕ್ಕೆ ಪರಿಣಾಮವೇನಾಗುವುದೋ ? "ಮಾಣಿಕ್ಯವೆಂದು ಹಿಡಿದರೆ ಕೆಂಡವಾಯ್ತು" ಸರವಿ (ಹಗ್ಗ)ಯೆಂದು ಹಿಡಿದರೆ ಹಾವಾಯಿತು" ಇನ್ನು ವಿಧಿ ತನ್ನನ್ನು ಕೊಲ್ಲದೆ ಬಿಟ್ಟೀತೇ ಎಂದು ಹೆದರುತ್ತಲೇ ಬಂದು, ನಾಟಿದ ಬಾಣವನ್ನು ಕಿತ್ತೆಸೆದು, ಸುರಿವ ನೆತ್ತರನ್ನು ತೊಳೆದು ಮನುಷ್ಯರೆಲ್ಲಾದರೂ ಮೃಗಗಳಾಗಿರುವುದುಂಟೆ ? ಮೃಗರೂಪದಲ್ಲಿನ ಈ ವಿನೋದವೆಲ್ಲಿ ? ತಪವಿದೆಲ್ಲಿ ? ಅನ್ಯಾಯವಾಗಿ ನಿಮ್ಮ ಈ ರೀತಿ ನನಗೆ ಸಾವಾಯಿತೇ ಎಂದು ನಿಟ್ಟುಸಿರುಡುತ್ತಾನೆ.

'ಹೌದೌದು ನಾವು ಪಾಪಿಗಳು. ನೀನೇ ಉತ್ತಮನು. ಅದಿರಲಿ ನಾನು ನನ್ನಿಯಳೊಡನೆ ಪ್ರೀತಿಯಲ್ಲಿ ತೊಡಗಿರುವಾಗಲೇ ನಮ್ಮನ್ನು ನೀ ಕೊಂದೆಯಾದ ಕಾರಣ, ನೀನೂ ನಿನ್ನ ಇನಿಯಳ ಬಯಕೆಯಲ್ಲಿ ಕೂಡಿದ್ದಾಗಲೇ ನಿನಗೆ ಸಾವು ಸಂಭವಿಸಲಿ' ಎಂದು ಶಾಪವೀಯುತ್ತಾನೆ.

ಪಾಂಡುವಿಗೆ ಇಡೀ ಪ್ರಸಂಗದ ಹಿಂದೆ ವಿಧಿಯಾಟವೇ ಕಾಣಿಸುತ್ತದೆ. ಶಾಪ ಹುಸಿಯಾಗಬೇಕಾದರೆ ತನಗೆ ಇಂದ್ರಿಯ ನಿಗ್ರಹ, ವೈರಾಗ್ಯ, ತಪಸ್ಸುಗಳೇ ದಾರಿ ಎನಿಸಿ, ಭೀಷ್ಮಾದಿಗಳಿಗೆಲ್ಲ ವಿಷಯ ತಿಳಿಸಿ, ತನ್ನ ಸಮಸ್ತ ವಸ್ತುಗಳನ್ನು ದೀನರಿಗೆ ಅನಾಥರಿಗೆ ನೀಡಿ, ತಪೋಮುಖಿಯಾಗಿ ಕಾಡಿಗೆ ಹೊರಡುತ್ತಾನೆ. ಮಾದ್ರಿ, ಕುಂತಿಯರೂ ಬಿಡದೆ ಹಿಂಬಾಲಿಸುತ್ತಾರೆ. ಜಿತೇಂದ್ರಿಯತ್ವ ವೈರಾಗ್ಯಗಳನ್ನು ಹಿಡಿದ ಮೇಲೆ ಹೆಣ್ಣಿನ ಸಂಗವಿಲ್ಲ, ಹೆಣ್ಣಿನ ಸಂಗವಿಲ್ಲದೆ ಸಂತಾನವಿಲ್ಲ. ಸಂತಾನವಿಲ್ಲದೆ ಮೋಕ್ಷವಿಲ್ಲ. ಇಂತಹ ಪರಿಸ್ಥಿತಿಯಲ್ಲಿ, ಸಮಸ್ಯೆಗೆ ಪರಿಹಾರವೇನು ? ಎಂಬ ಪ್ರಶ್ನೆ ಎದುರಾದಾಗ, ಪಾಂಡುವಿಗೆ ಹೊಳೆದದ್ದು ಭೃಗು, ಜಾಬಾಲಿ, ಜಮದಗ್ನಿ ಮೊದಲಾದ ಋಷಿ ಪುಂಗವರನ್ನು ಸೇವಿಸಿ ಮಂತ್ರ ಬೀಜದಿಂದ ಸಂತತಿ ಪಡೆಯುವುದು, ಇದನ್ನೇ ಕುಂತಿಗೆ ಸಲಹೆ ನೀಡುತ್ತಾನೆ. ಇದು ಕುಂತಿಗೆ ಒಪ್ಪಿತವಾಗುವುದಿಲ್ಲ. ದೂರ್ವಾಸರು ಕೊಟ್ಟ ಮಂತ್ರ ಪಂಚಕದ ವರವಿದೆ. ಅವರ ಮೂಲಕ ಮಕ್ಕಳನ್ನು ಪಡೆಯುತ್ತಾಳೆ. ಅವರ ಬಾಲ ಲೀಲೆಗಳಲ್ಲಿ ಮೈ ಮರೆತು ಕಾಲ ಕಳೆದದ್ದೇ ತಿಳಿಯುವುದಿಲ್ಲ.

ನಿಸರ್ಗ ಸಮೃದ್ಧಿಯಿಂದ ಕೂಡಿದ ವನ ಪ್ರಾಂತ ನಿತ್ಯ

ನವೋನವೋನ್ನವವಾಗಿ ಕಾಣುವ ಪ್ರಕೃತಿ ಸೌಂದರ್ಯ ಸಹಜವಾಗಿಯೇ ಮತ್ತೇರಿಸುತ್ತದೆ. ಅಂತಹುದರಲ್ಲಿ ಇನ್ನು ವಸಂತ ಪ್ರವೇಶ ಮಾಡಿಬಿಟ್ಟರಂತೂ ಹೇಳುವುದೇ ಬೇಡ. ಪ್ರಣಯಿಗಳ, ವಿರಹಿಗಳ ಸ್ಥಿತಿಯಲ್ಲಿ ಅಲ್ಲೋಲ, ಕಲ್ಲೋಲ ! ಪಂಪ, ಕುಮಾರವ್ಯಾಸರಂತೂ ತಮ್ಮ ಪ್ರತಿಭೆಯ ಗರಿಗೆದರಿ ಮೈಮರೆತು ಮಧು ಮಾಸದಲ್ಲಿನ ರಮಣೀಯತೆ ಮತ್ತೇರಿಸುವ ಮೋಹಕತೆಗಳನ್ನು, ಕಾಮ, ಪ್ರೇಮ ಪ್ರಚೋದಕತೆಗಳನ್ನು ಮೈದುಂಬಿ ವರ್ಣಿಸಿದ್ದಾರೆ. ವಸಂತ ರಾಜನ ಬರವಿಗೆ ವನದೇವತೆ ಸಕಲ ಸಿದ್ಧತೆಗಳೊಂದಿಗೆ ಸಿಲುಕ್ತಾಳೆ. ಅಶೋಕೆಯ ಚಿಗುರುಗಳು, ಧ್ವಜಗಳಾಗಿ, ಮಾಮರದಿಂದ ಮಾಮರಕ್ಕೆ ಹಬ್ಬುವ ಮಾಧವೀಲತೆಗಳು ತೋರಣಗಳಾಗಿ, ಭೋರ್ಗರೆಮ ಮೊರೆವ ದುಂಬಿಗಳು ವಾದಕರಾಗಿ, ಚೆಲ್ಲಿದ ಹೂಗಳೇ ರಂಗವಲ್ಲಿಯಾಗಿ, ಸ್ವಾಗತಕ್ಕೆ ಅಣಿಯಾಗುತ್ತದೆ. ಇಡೀ ಪರಿಸರವೇ ಜನಮನದ ಕಣ್ಸೆಳೆವಂತೆ ಕಾಣಿಸುತ್ತದೆ.

ಕುಮಾರವ್ಯಾಸನಂತೂ ರೂಪಕ ಚಕ್ರವರ್ತಿ ಎಂಬ ಅಭಿದಾನವನ್ನು ಸಾರ್ಥಕ ಪಡಿಸಿಕೊಂಡಿದ್ದಾನೆ.ಆ ಮಧು ಮಾಸದಲ್ಲಿ ದುಂಬಿಗಳು ತಾವರೆಯೆಸಳಿನ ದೋಣಿಗಳಲ್ಲಿ ಕುಳಿತು ಕುಸುಮರಸದುಬ್ಬರದ ತೊರೆಯನ್ನು ಹಾಯ್ದುವಂತೆ ! ಕೋಂಬೆಗಳು, ಸರಸ ರಾಜ ಹಂಸಗಳು ಹೂಗಳಿಂದ ಒಸರುವ ಮಕರಂದ, ಹಿಮದ ಕೆಸರಿನಲ್ಲಿ ಇದ್ದುವಂತೆ !! ಜೊತೆಗೆ ತಂಪು, ಕಂಪುಗಳನ್ನು ಹೊತ್ತು ಬೀಸುವ ಮಂದ ಮಾರುತ-ಒಟ್ಟಿಗೆ ವಿರಹಿಗಳನ್ನು, ಮುನಿಜನವನ್ನೂ ಕಂಗೆಡಿಸಿತು.

ಇಂತಹ ಹೊತ್ತಿನಲ್ಲಿ ಮಾದ್ರಿ ವನ ಕ್ರೀಡಾ ನಿಮಿತ್ತ ಬಂದು ವನದಲ್ಲಿದ್ದ ಹೂಗಳನ್ನು ಕೊಯ್ದು ಅವೆಲ್ಲವುಗಳನ್ನು ಕಟ್ಟಿ, ಹೂಗಳಿಂದ ಸರ್ವಾಂಗವನ್ನೂ ಶೃಂಗರಿಸಿಕೊಂಡು ವಿಲಾಸದಲಿ ರಂಬೆಯೋ, ಊರ್ವಶಿಯೋ ಎಂಬಂತೆ ಕಾಣಿಸುತ್ತ, ವಸಂತ ಕಾಂತೆಯಾಗಿ ಸುಳಿದಾಡುತ್ತಾಳೆ. ಪಂಪನ ಮಾತಿನಲ್ಲಿ ಅವಳು ತೊಟ್ಟ ಪೂಮೊಡುಗೆ, ಮದನನು ತೊಟ್ಟ ಹೂ ಬಾಣಕ್ಕೆ ಸಮನಾಗಿದೆ. ಅಭಿನವ ರತಿಯಂತೆ ಕಂಗೊಳಿಸುತ್ತಾ ಸುಳಿದಾಡುತ್ತಿದ್ದ ಮಾದ್ರಿಯನ್ನು ಕಂಡು ಪಾಂಡುವಿನಲ್ಲಿ ಅಲ್ಲಿಯವರೆಗೆ ಸಂಯಮದ ಸಂಕೋಲೆಯೊಳಗೆ ಬಿಗಿದಿರಿಸಿದ್ದ ಪ್ರೀತಿ,

ಕಾಮಗಳು ಒಮ್ಮೆಲೇ ಸಂಕೋಲೆಗಳನ್ನು ಕಡಿದುಕೊಂಡು ಹೊರಹೊಮ್ಮುತ್ತವೆ. ಆ ಕ್ಷಣವೇ ಅವನಲ್ಲಿ ಮನ್ಮಥನ ಬಾಣಗಳು ನಾಟುತ್ತವೆ. ಕೇವಲ ಪಂಚಶರಗಳಷ್ಟೇ ಅಲ್ಲ ಎಂಟು ಕೋಟಿ ರೋಮಗಳೆಲ್ಲವೂ ಬಾಣಗಳಾಗಿ ನೆಟ್ಟು ಅವನನ್ನು ಕಂಗೆಡಿಸುತ್ತವೆ.

ಪ್ರೀತಿ, ಕಾಮಗಳ ಉತ್ಕಟತೆಯಲ್ಲಿ, ತಾಪದಲ್ಲಿ ಶಾಪದ ನೆನಪೂ ಕರಗಿ ಹೋಗುತ್ತದೆ. ಅವಳಿಗರಿವಿಲ್ಲದಂತೆ ಹಿಂದಿನಿಂದ ಹೋಗಿ ಮೃತ್ಯು ದೇವತೆಯನ್ನು ಅಪ್ಪುವಂತೆ ಅವಳನ್ನು ಅಪ್ಪಿಕೊಳ್ಳುತ್ತಾನೆ. ಉಕ್ಕುಕ್ಕಿ ಚೋದಿಸುವ 'ಕಾಮ'ದ ಕೈ ಸೆರೆಯಾಗಿ ಮಾದ್ರಿಯ ಅಳಲು, ಪ್ರಾರ್ಥನೆಗಳ ನಡುವೆಯೂ, ಅವನಿಗಿದ್ದ ಶಾಪದ ನೆನಪಿನಿಂದಲೂ ಎಚ್ಚರಿಸಿ ಕೇಳಿಕೊಂಡರೂ ಪಾಂಡು ಲೆಕ್ಕಿಸದೆ ಅವಳ ಮೇಲೆ ಬಿದ್ದು ತನ್ನ ತೋಳುಗಳಿಂದ ಬಿಗಿಯಾಗಿ ಅಪ್ಪಿ ಮುದ್ದಾಡುತ್ತಾನೆ. ಅವನಿಂದ ಬಿಡಿಸಿಕೊಳ್ಳಲು ಎಷ್ಟೇ ಕೊಸರಾಡಿದರೂ ಮಾದ್ರಿಗೆ ಸಾಧ್ಯವಾಗುವುದಿಲ್ಲ. ವಿಧಿ ಮುನಿ ಶಾಪದ ರೂಪದಲ್ಲಿ ಅವನ ಬದುಕನ್ನು ಕವಿಯುತ್ತದೆ. ವಿಧಿ ಯಾಟದ ಮುಂದೆ ಪ್ರೀತಿ, ನೀತಿಗಳು ಯಾವ ಲೆಕ್ಕಕ್ಕೂ ಇಲ್ಲ. "ನಲ್ಲಳ ಮೃದು ಮೃಣಾಳ ಕೋಮಳ ಬಾಹು ಪಾಶಂಗಳೇ ಯಮಪಾಶಂಗಳಾಗಿ ಪರಿಣಮಿಸುತ್ತದೆ. ಮಾದ್ರಿಯ ಅಳಲು ಮುಗಿಲಿಗೇರುತ್ತದೆ. ರತಿ ಸುಖದ ಝೊಂಪಿನಲಿ ಮೈ ಮರೆತಂತೆ ಕಾಣುವ ಮುಖ, ಮುಚ್ಚಿದ ಕಣ್ಣುಗಳು, ಸಡಿಲಿದ ತೆಕ್ಕೆ, ಬಾಗಿದ ದೇಹ, ಹೊರಟ ನಿಟ್ಟುಸಿರು, ಮಾದ್ರಿಯೆದೆಗೆ ಕೆನ್ನೆಯಾನಿಸಿ ಕುಸಿದ ರೀತಿಯಿಂದಲೇ ಪರಿಸ್ಥಿತಿಯ ಅರಿವಾಯಿತು."

ತನ್ನ ಇನಿಯ ಚಿರ ವಿದಾಯಕ್ಕೆ ಅಣಿಯಾಗಿದ್ದಾನೆ. ಇಲ್ಲಿಯವರೆಗೆ ಶಾಪದ ಹೊರೆಹೊತ್ತು ತಳ್ಳಂಕದಲಿ ಬದುಕುತ್ತಿದ್ದ ಅರಸ ಈಗ ಹೊರೆ ಇಳಿಸಿಕೊಂಡಿದ್ದಾನೆ. ಇದಕ್ಕೆಲ್ಲ 'ತಾನೇ ಕಾರಣ'ಳಾದೆ ಎಂದೆನಿಸಿ "ಎಲೈ ಅರಸ ಸುಮ್ಮನಿರಲಾರದೆ ವಿಷ ಕನ್ನೆಯನ್ನು ಅಪ್ಪಿದೆಯಲ್ಲಾ. ನಮ್ಮನ್ನು ಅನಾಥರನ್ನಾಗಿ ಮಾಡಿದೆಯಲ್ಲಾ ! ಪಾಪದ ರೂಪದಲ್ಲಿ ತಾಪಸನ ಶಾಪವಿದ್ದುದನ್ನು ತಿಳಿದೂ ತಿಳಿದೂ ನನ್ನನ್ನು ಬಂದು ಕೂಡಿದೆಯಲ್ಲಾ ! ನಾನು ನಿಜವಾಗಿಯೂ ಪಾಪಿ. ಈ ಪಾಪಿಯ ಮೈ ಮುಟ್ಟಿ ಸಾವನ್ನು ತಂದುಕೊಂಡೆ. 'ನಿನಗೆ ಕೂಡುವ ಕ್ಷಣದಲ್ಲಿ ಸಾವು

ಸಂಭವಿಸುವುದೆಂಬುದನ್ನು ತಿಳಿದೂ ನನ್ನಲ್ಲಿಗೆ ಬಂದೆಯಾ ? ಇರಲಿ, ನಿನ್ನ ತೀರದ ಬಯಕೆಯನ್ನು ನಿನ್ನೊಡನೆಯೇ ಸ್ವರ್ಗಕ್ಕೆ ಬಂದು ತೀರಿಸುವೆ. ಇದಕ್ಕೆ ತಪ್ಪುವುದಿಲ್ಲ' ಎಂದು ಅಳಲನ್ನು ತೋಡಿಕೊಳ್ಳುತ್ತಾಳೆ." ಚಂದ್ರ ವಂಶದಲ್ಲಿ ಹುಟ್ಟಿ ಧವಳಚ್ಛತ್ರ ಛಾಯೆಯಲ್ಲಿ ಕುರು ಕುಲವಂಶ ತಿಲಕನಾಗಿ ಮೆರೆದವನನ್ನು ವಿಧಿ ಹೀಗೆ ಈ ನಿರ್ಜನ ಪ್ರದೇಶದಲ್ಲಿ ಅನ್ಯಾಯವಾಗಿ ತಂದಿರಿಸಿದೆಯಲ್ಲಾ!' ಎಂದು ವಿಧಿ ಮಾಡಿದ ವಂಚನೆಗಾಗಿ ದೂರುತ್ತಾಳೆ. ವನದೇವತೆಗಳ ಎದೆ ಕರಗುವಂತೆ ಹಲುಬುತ್ತಾಳೆ. ಅಗಲಿಕೆಯ ಶೋಕದಿಂದ ದಣಿದ ತನ್ನ ದೇಹವನ್ನು ಪಾಂಡುವಿನ ಮೃತ ದೇಹದ ಮೇಲೆ ಕೆಡುವುತ್ತಾಳೆ.

ಈ ಪ್ರಸಂಗದ ಬಗ್ಗೆ ಎಲ್ಲ ಕವಿಗಳೂ ಹೆಚ್ಚಿನ ಒತ್ತು ಕೊಟ್ಟಿದ್ದಾರೆ. ಗಂಡ ಹೆಂಡಿರಲ್ಲಿ, ಪ್ರೇಮಿಗಳಲ್ಲಿ ಯಾರೊಬ್ಬರು ಅಗಲಿದರೂ ಬದುಕು ಅಸಹನೀಯವಾಗುತ್ತದ. ಪ್ರೀತಿಯ ನೆನಪುಗಳಲ್ಲಿ ಬಾಳುವುದು ದುಸ್ತರವಾಗುತ್ತದೆ. ನೆನಪುಗಳು ಶೂಲಗಳಾಗಿ ಹಿಂಸಿಸುತ್ತವೆ. ಬದುಕಿ ಇಂತಹ ನೋವನ್ನು ಸಹಿಸುವುದಕ್ಕಿಂತ ಪ್ರೀತಿಸಿದವರೊಂದಿಗೆ ಸಾಯಲು ಪ್ರೀತಿಯ ಗಾಢತೆಯೇ ಧೈರ್ಯವನ್ನು ನೀಡುತ್ತದೆ. ಮಾದ್ರಿಯೂ ತನ್ನ ಪತಿಯೊಡನೆ ಸಹಗಮನ ಮಾಡಿ ತನ್ನಿನಿಯನಿಗಿದ್ದ ಪ್ರೀತಿಯನ್ನು ಸಾರ್ಥಕ ಪಡಿಸಿದ್ದಾಳೆ.

★ ★ ★

ಸೆಲೆ - ೧೦

# ಮೇದಿನಿಯ ಸಲಿಸುವೆನು ನಿನ್ನ ಮಕ್ಕಳಿಗೆ.

ಗಂಡು, ಹೆಣ್ಣಿನ ಪ್ರೀತಿಯಲ್ಲಿ ನಿಸ್ವಾರ್ಥತೆಯೇ ಹೆಚ್ಚಾಗಿ ಇರುವುದಾದರೂ ಕೆಲವು ಸಂದರ್ಭಗಳಲ್ಲಿ ಪ್ರೀತಿ ಷರತ್ತುಗಳನ್ನು ನಿರೀಕ್ಷಿಸುತ್ತದೆ. ಮಹಾಭಾರತದಲ್ಲಿಯಂತೂ ಪ್ರೀತಿಯನ್ನು ಹಲವು ಸೆಲೆಗಳಲ್ಲಿ ಗುರುತಿಸುವ ಸಾಕಷ್ಟು ಸಾಧ್ಯತೆಗಳಿವೆ. ಷರತ್ತಿನ ಮೂಲಕ ಪ್ರೀತಿಯನ್ನು ನೀಡಿದ ಅಂತಹ ಒಂದು ಪ್ರಸಂಗ ಶಂತನು-ಸತ್ಯವತಿಯರದು. ಒಬ್ಬರ ಷರತ್ತಿನ ಪೂರೈಕೆಗಾಗಿ ಮತ್ತೊಬ್ಬರ ತ್ಯಾಗದ ಅನಿವಾರ್ಯ ಪರಿಸ್ಥಿತಿ ಒದಗುತ್ತದೆ.

ಬೆಸ್ತ ಕುಲದ ಒಡೆಯನಾದ ದಾಶರಾಜನಿಗೆ, ಮತ್ಸ್ಯ ಗರ್ಭದಲ್ಲಿ ಹುಟ್ಟಿದ ಅವಳಿ ಮಕ್ಕಳು ದತ್ತು ಮಕ್ಕಳಾಗಿ ದೊರೆಯಲು ಅವನು ಅವರಿಬ್ಬರಿಗೆ ಮತ್ಸ್ಯ ಗಂಧಿ, ಮತ್ಸ್ಯಗಂಧ ಎಂದು ಹೆಸರಿಟ್ಟು ಸಾಕಿದನು. ಮತ್ಸ್ಯಗಂಧಿ ವಯಸ್ಸಿಗೆ ಬರುತ್ತಿದ್ದಂತೆ ಅನುಪಮ ಸೌಂದರ್ಯವನ್ನು ಪಡೆದಿದ್ದಳು. ಒಮ್ಮೆ ಪರಾಶರರು ಗಂಗೆಯನ್ನು ದಾಟಬೇಕಾಗಿ ಬಂದಾಗ ಮತ್ಸ್ಯಗಂಧಿಯನ್ನು ದಾಟಿಸಲು ಕೇಳಿಕೊಂಡನು. ಸಾವಿರ ಮಂದಿಯ ಭಾರವಿಲ್ಲದೆ ಹರಿಗೋಲು ನಡೆಯದೆನ್ನಲು, ತಾನೇ ಆ ಭಾರವನ್ನು ಪಡೆಯುವುದಾಗಿ ಹೇಳಿ ಹತ್ತುವನು. ಅವಳ ರೂಪ ಲಾವಣ್ಯಕ್ಕೆ ಎಳಸಿದ ಪರಾಶರ ಮುನಿಗಳು, ಮಂಜಿನ ಮುಸುಕನ್ನು ಕವಿಸಿ ಪ್ರೀತಿಯಿಂದ ಅವಳನ್ನು ಕೂಡಿ ಮತ್ತೆ ಅವಳ ಕನ್ಯತ್ವವನ್ನು ತನ್ನ ವಚನದಂತೆ ಹಿಂತಿರುಗಿಸುತ್ತಾನೆ. ಆದರೆ ಅವರಿಬ್ಬರ ಪ್ರೀತಿ, ಸಂಯೋಗದ ಫಲವಾಗಿ ಜ್ಞಾನ ಸ್ವರೂಪಿ ವ್ಯಾಸರು ಅವತರಿಸುತ್ತಾರೆ. ಮುನಿಗಳ ಪ್ರೀತಿಯ ರೀತಿಯೇ ವಿಚಿತ್ರ ! ಬಯಸ್ಸಿದ್ದನ್ನು ಅನುಭವಿಸಿ ಮತ್ತೆ ಮಾಮೂಲಿಯಂತೆ ಸಹಜವಾದ ಜಿತೇಂದ್ರಿಯ ಸ್ಥಿತಿಗೆ ತಲುಪುತ್ತಾರೆ. ಸಾಮಾನ್ಯ ಮನುಷ್ಯರ ಪ್ರೀತಿಯ ತೀವ್ರತೆಗಳು ಇವರನ್ನು ಕಾಡುವುದೇ ಇಲ್ಲ. ಪರಾಶರರೂ ಅಷ್ಟೇ. ಆ ಕ್ಷಣದ ಭೋಗದ ನಂತರ ಅವಳನ್ನು ತೊರೆದು ಬಿಡುತ್ತಾರೆ.

ಮತ್ಸ್ಯಗಂಧಿ ಅವರ ಅನುಗ್ರಹದಿಂದ ಯೋಜನಗಂಧಿ ಯಾಗುತ್ತಾಳೆ. ಶಂತನು ಒಮ್ಮೆ ಮೃಗಯಾ ವ್ಯಾಜದಿಂದ ಸಂಚರಿಸುತ್ತಿರುವಾಗ ಯೋಜನಗಂಧಿಯ ಗಂಧ ಮಾದಕತೆಗೆ ಮನಸೋತು ಗಂಧದ ಜೆನ್ನರಸಿ ಬಂದು ಇವಳನ್ನು ನೋಡಿ ಕ್ಷಣಾರ್ಧದಲ್ಲಿ ಮೋಹಿತನಾಗುತ್ತಾನೆ. ತನ್ನ ಅಂತಸ್ತು ಅಧಿಕಾರ ಎಲ್ಲವುಗಳನ್ನು ಮರೆತು ಪ್ರೀತಿಯ ಅತಿರೇಕದಲ್ಲಿ ತನ್ನನ್ನೊಲಿದು ತನ್ನೊಡನೆ ಬರಲು ಆಹ್ವಾನಿಸುತ್ತಾನೆ.

ಯೋಜನ ಗಂಧಿಗೂ ಶಂತುವಿನಲ್ಲಿ ಪ್ರೀತಿ ಮೂಡಿದರೂ ತಂದೆಯಪ್ಪಣೆಯಿಲ್ಲದೆ ಒಪ್ಪಿಗೆ ನೀಡಲಾಗದ ಅಸಹಾಯಕತೆಯನ್ನು ವ್ಯಕ್ತ ಪಡಿಸುತ್ತಾಳೆ. ಭಗ್ನ ಮನಸ್ಕನಾದ ಶಂತನು ಅರಮನೆಗೆ ಮರಳಿದರೂ ವಿರಹಾಕುಲನಾಗಿ ಅನ್ನಾಹಾರಗಳನ್ನು ಬಿಟ್ಟು ಬೇಯತೊಡಗುತ್ತಾನೆ. ಅವನ ಸ್ಥಿತಿ ಎಲ್ಲರಿಗೂ ಆತಂಕಕಾರಿಯಾಗುತ್ತದೆ. ಹೆಗ್ಗಡೆಗಳನ್ನು, ದಾಶರಾಜನಲ್ಲಿಗೆ ಕನ್ಯಾರ್ಥವಾಗಿ ಕಳುಹಿಸಲು, ದಾಶರಾಜನು ನಿರಾಕರಿಸುತ್ತಾನೆ. ಹಿರಿಯ ಮಗ ಭೀಷ್ಮನಿರುವಾಗ ತನ್ನ ಮಗಳ ಮಕ್ಕಳಿಗೆ ರಾಜ್ಯಾಧಿಕಾರ ಅಸಾಧ್ಯ ವಾದ್ದರಿಂದ ತನಗೆ ತನ್ನ ಕನ್ಯೆಯನ್ನು ಕೊಡಲಾಗುವುದಿಲ್ಲ. ಒಂದು ವೇಳೆ ತನ್ನ ಮೊಮ್ಮಕ್ಕಳಿಗೆ ರಾಜ್ಯವೀಯುವ ಷರತ್ತಿಗೆ ಒಪ್ಪುವುದಾದರೆ ತನಗೆ ಅಭ್ಯಂತರವಿಲ್ಲವೆನ್ನುತ್ತಾನೆ.

ಶಂತನು ಸಂದಿಗ್ಧದಲ್ಲಿ ಸಿಲುಕುತ್ತಾನೆ ! ಕ್ರಮಬದ್ಧವಾಗಿ ರಾಜ್ಯದ ಒಡೆತನಕ್ಕೆ ಹಿರಿಯ ಮಗನಾದ ಗಾಂಗೇಯನಿರುವಾಗ, ‘ ಶಂತನು ತನ್ನ ತೀಟೆಗಾಗಿ ತನ್ನ ಪ್ರೀತಿಸಿದಾಕೆಯ ಮಗನಿಗೆ ರಾಜ್ಯವನ್ನು ಕೊಟ್ಟನೆಂದು ನಿಂದಿಸುವುದಿಲ್ಲವೊ?’ ಎಂದು ಆಲೋಚಿಸಿ ಒಪ್ಪದೆ, ತನ್ನೊಳಗೇ ತಾನು ಸವೆಯುತ್ತಿರುವುದನ್ನು ಭೀಷ್ಮನು ಕಂಡು, ಇದೇ ಚಿಂತೆಯಲ್ಲಿ ತಂದೆಗೇನಾದರೂ ಆದರೆ ಅದರಿಂದ ತನಗೇ ಅಪಖ್ಯಾತಿ ಬರುವುದೆಂದೆಣಿಸಿ, ತನ್ನ ತಂದೆಯ ಸುಖ, ಸಂತೋಷದ ಮುಂದೆ ಈ ರಾಜ್ಯಲಕ್ಷ್ಮಿ ಯಾರಿಗೆ ಬೇಕು ? ಎನಿಸಿ ತಾನೇ ಹೋಗಿ ದಾಶರಾಜನನ್ನು ಒಪ್ಪಿಸಿ, ಯೋಜನಗಂಧಿ ಅಥವಾ ಸತ್ಯವತಿಯನ್ನು ತಂದು ಮದುವೆ ಮಾಡಿಸುತ್ತಾನೆ.

ಪ್ರೀತಿ ಈ ಜಗೆಯಲ್ಲಿ ತನ್ನ ಜೊತೆ ಪ್ರೀತಿಸುವವರೇ ಅಲ್ಲದೆ ಆ

ಪ್ರೀತಿಯ ಯಶಸ್ಸಿಗಾಗಿ ಸಾರ್ಥಕತೆಗಾಗಿ ಪ್ರೀತಿಸುವವರಿಗೆ ಸಂಬಂಧಪಟ್ಟ ಇನ್ನೂ ಅನೇಕ ವ್ಯಕ್ತಿಗಳನ್ನು ಒಳಗೊಂಡು ಅವರಿಂದ ತ್ಯಾಗವನ್ನೋ, ಒತ್ತಾಸೆಯನ್ನೋ ಬಯಸುತ್ತದೆ. ವಯಸ್ಸಿಗೆ ಬಂದ ಮಗನಿರುವಾಗ, ಅವನಿಗೇ ಮದುವೆ ಮಾಡಬೇಕಾದ ಸಮಯದಲ್ಲಿ ತಾನೇ ಪ್ರೀತಿಯ ಸೆಳೆತಕ್ಕೆ ಒಳಗಾಗುತ್ತಾನೆ. ತನ್ನ ಪ್ರೀತಿಗಾಗಿ ಮಗನು ಮಾಡಿದ ತ್ಯಾಗ, ರಾಜ್ಯವನ್ನು ಎಂದಿಗೂ ಬೇಡುವುದಿಲ್ಲ. ಎಂಬಷ್ಟಕ್ಕೇ ಸೀಮಿತವಾಗದೆ, ತನ್ನಿಂದ ಜನಿಸುವ ಮಕ್ಕಳು ತಮ್ಮ ಹಕ್ಕಿಗಾಗಿ ಮುಂದೆ ಸಮಸ್ಯೆಯನ್ನೇ ಸೃಷ್ಟಿಸಿಯಾರು ಎಂಬ ಭಯಕ್ಕೆ ಮದುವೆಯನ್ನೇ ಆಗದೆ ಆಜನ್ಮ ಬ್ರಹ್ಮಚಾರಿಯಾಗಿ ಉಳಿಯುವ ಭೀಷ್ಮ ಪ್ರತಿಜ್ಞೆಯನ್ನು ಕೈಗೊಳ್ಳುವ ಹಂತವನ್ನು ತಲುಪಬೇಕಾಗುತ್ತದೆ. ಶಂತನು-ಸತ್ಯವತಿಯರ ಪ್ರೀತಿಯ ಯಶಸ್ಸಿಗೆ ಬೇರೆಯವರು ಬೆಲೆಕಟ್ಟಲಾಗದ ಬೆಲೆ ತೆರಬೇಕಾಗುತ್ತದೆ. ಗಂಗೆಯಿಂದ ಸಾಕಷ್ಟು ಪ್ರೀತಿಯನ್ನು, ದಾಂಪತ್ಯ ಸುಖವನ್ನು ಅನುಭವಿಸಿದ್ದರೂ ಹೆಣ್ಣಿನ ಪ್ರೀತಿಗೆ ಮಿತಿಯಿಲ್ಲದಂತಹ ರೀತಿಯಲ್ಲಿ ಸತ್ಯವತಿಗಾಗಿ ತುಡಿದ ಶಂತನುವಿಗೆ ತನ್ನ ಹಿರಿಯ ಮಗನಾದ ಭೀಷ್ಮನ ತ್ಯಾಗ, ಜೀವನ ಪರ್ಯಂತ ಅವಿವಾಹಿತನಾಗಿ ಉಳಿದು ಸ್ತ್ರೀ ಸುಖ, ಪ್ರೀತಿ ವಂಚಿತನಾಗಿ ಉಳಿಯುತ್ತಾನೆಂಬ ಪ್ರಜ್ಞೆಯಾಗಲೀ, ಅದಕ್ಕೆ ತಾನು ಕಾರಣನಾದೆನೆಂಬುದಕ್ಕಾಗಿ ಪಶ್ಚಾತ್ತಾಪವಾಗಲೀ ಎಲ್ಲಿಯೂ ಕಾಣಿಸದೆ ಹೋಗುತ್ತದೆ. ಹೆಣ್ಣಿನ ಪ್ರೀತಿ ಒಮ್ಮೊಮ್ಮೆ ವಿವೇಕವನ್ನು ಕುರುಡಾಗಿಸುತ್ತದೆ.

★ ★ ★

ಸೆಲೆ - ೧೧

# ಆದೊಡ್ಡೈವರು ಮಕ್ಕಳನು ತಲೆಗಾಯ್ದು ತೋರ್ರೈ ಕಂದ

ಪ್ರೀತಿಯ ಸಂಬಂಧಗಳು ಅನೇಕ ರೀತಿಯಲ್ಲಿ ಇರುತ್ತವೆ. ಆದರೆ ಸಂಬಂಧಗಳು ಮುಂದುವರೆದು ಕೊಂಡು ಹೋಗುತ್ತವೆಯೇ ಹೊರತಾಗಿ ಅದರ ಮೊದಲಲ್ಲಿ, ಮೂಲದಲ್ಲಿ ಇರುವ ಪ್ರೀತಿ, ಪ್ರೀತಿಯಾಗಿ ತನ್ನ ಶುದ್ಧ ರೂಪದಲ್ಲಿ ಸುರಕ್ಷಿತವಾಗಿ ಇರುತ್ತವೆ. ಎಂದು ಮಾತ್ರ ಹೇಳಲಾಗುವುದಿಲ್ಲ. ಕಾಲಾಂತರದಲ್ಲಿ ಈ ಪ್ರೀತಿಯನ್ನು ಸ್ವಾರ್ಥ, ಸ್ವಲಾಭ, ಸೇಡುಗಳಿಗೆ ಉಪಯೋಗಿಸಿಕೊಂಡು ದುರ್ಬಲಗೊಳಿಸಲಾಗುತ್ತದೆ. ಮತ್ತು ನಿಜ ಪ್ರೀತಿಯ ಅರ್ಥಕ್ಕೆ ಧಕ್ಕೆ ತರಲಾಗುತ್ತವೆ.

ಪ್ರೀತಿಗೆ ಒಳಗಾಗಿರುವ ವ್ಯಕ್ತಿ ನೈತಿಕ ಮೌಲ್ಯಗಳಿಗೆ, ಸದ್ಗುಣಗಳಿಗೆ ಬೆಲೆ ಕೊಡುವಂತಹ ಮಹಾನ್ ಚೇತನವಾದರೆ, ಅಂತಹ ವ್ಯಕ್ತಿಗಳ ಬೋಳೆತನವನ್ನು, ಸಾಚಾತನವನ್ನು ದುರ್ಲಾಭಕ್ಕಾಗಿ ಬಳಸಿಕೊಳ್ಳಲಾಗುತ್ತದೆ.

ನಮ್ಮ ಅನೇಕ ಪುರಾಣಗಳಲ್ಲಿ, ಮಹಾಕಾವ್ಯಗಳಲ್ಲಿ ಪ್ರೀತಿಯ ವಿಭಿನ್ನ ನೆಲೆಗಳನ್ನು, ರೂಪಗಳನ್ನು ಗುರುತಿಸಲು ಅನೇಕ ಸಂದರ್ಭಗಳು ನಮಗೆ ಒದಗಿ ಬರುತ್ತವೆ. ಅದರಲ್ಲಿಯೂ ಮಹಾಭಾರತವಂತು ನಮ್ಮ ಯಾವುದೇ ಮಗ್ಗುಲಿನ, ಪರಿಕಲ್ಪನೆಯ ಅಧ್ಯಯನಕ್ಕೆ ಅಕ್ಷಯ ಆಕರವಾಗಿ ಒದಗಿ ಬರುತ್ತದೆ. ಅಸಂಖ್ಯಾತ ವ್ಯಕ್ತಿಗಳು ವಿಭಿನ್ನ ಮನೋಧರ್ಮಗಳ ಹಿನ್ನೆಲೆಯಲ್ಲಿ ಕಾಣಿಸಿಕೊಳ್ಳುವರಾದರೂ, ಪಂಪನ ದೃಷ್ಟಿಯಲ್ಲಿ ಉದಾತ್ತ ಚರಿತ್ರವಂತನಾಗಿ ಕಾಣಿಸಿಕೊಂಡ ಕರ್ಣ ನಮ್ಮೆಲ್ಲರಿಗೂ ಉದಾತ್ತನೇ ಆಗಿದ್ದಾನೆ. ಮೌಲ್ಯ ನಿಷ್ಠ ಸದ್ಗುಣಗಳಿಗೆ ಪ್ರತೀಕವಾಗಿ ನಿಲ್ಲುವುದೇ ಅಲ್ಲದೆ ಎಲ್ಲ ರೀತಿಯಿಂದಲೂ ವಿಧಿವಂಚಿತನಾಗಿ, ನಮ್ಮೆಲ್ಲರ ಕರುಣೆ, ಸಹಾನುಭೂತಿ, ಮೆಚ್ಚುಗೆಗೆ ಪಾತ್ರನಾಗಿದ್ದಾನೆ. ಕರ್ಣ ಚರಿತ್ರೆಯೇ ಅದ್ಭುತವೆನಿಸಿದ್ದರಿಂದಲೇ, ಎಲ್ಲರಿಗಿಂತ ಕರ್ಣ ಪಾತ್ರವೇ ಮಹತ್ತರವೆನಿಸಿದ್ದರಿಂದಲೇ ಪಂಪ 'ಕರ್ಣ ರಸಾಯನ ಮಲ್ತೆ ಭಾರತಂ' ಎಂದು ಹೇಳಿ 'ಕರ್ಣ' ಪದದ ಶ್ಲೇಷಾರ್ಥದ ಮೂಲಕ ಹೊಗಳಿದ್ದಾನೆ.

ಮಹಾಭಾರತ, ರಾಮಾಯಣಗಳು ನಮ್ಮೆಲ್ಲ ಕನ್ನಡ ಕವಿಗಳಿಗೆ ಪ್ರಿಯವೇ ಆದರೂ ಮಹಾಭಾರತ ವೈವಿಧ್ಯತೆಯಿಂದ, ಸಮಕಾಲೀನ ವ್ಯಾಖ್ಯಾನಕ್ಕೆ ದೊರೆಯುವುದರಿಂದ ತುಂಬಾ ಆಪ್ತವಾಗಿದೆ. ಅದರಲ್ಲಿಯೂ ಕರ್ಣ ಜನ್ಮದಾರಭ್ಯ ವಿಧಿವಶನಾಗಿ ಕುರು ವಂಶದಲ್ಲಿ ಹುಟ್ಟಿಯೂ ಅನ್ಯಾಯ, ಅವಮಾನ, ಹತಾಶೆಗಳಿಗೆ ಗುರಿಯಾಗುತ್ತಲೇ ಬಂದ. ಹುಟ್ಟಿದ ಕ್ಷಣದಲ್ಲಿಯೇ ತಾಯಿ ಪ್ರೀತಿಯಿಂದ ವಂಚಿತನಾಗಿ, ಸಾಕು ಮಗನಾಗಿ ಬೇರೆಲ್ಲಿಯೋ ಬೆಳೆದ. ನಂತರ ದುರ್ಯೋಧನನಂತಹ ಗೆಳೆಯನ ಸಹವಾಸದಿಂದ ದುಷ್ಟ ಚತುಷ್ಟಯದಲ್ಲಿ ಒಬ್ಬನಾಗಿ ಪರಿಗಣಿತನಾದ. ಅವಮಾನವಾಗುತ್ತಿದ್ದ ಸಂದರ್ಭದಲ್ಲಿ ತನ್ನ ಸಹಾಯಕ್ಕೆ ಬಂದು ತನಗೊಂದು ಗೌರವ, ಪ್ರತಿಷ್ಠೆಯ ಸ್ಥಾನವನ್ನು ನೀಡುವುದರ ಜೊತೆಗೆ ಮಿತ್ರ ಪ್ರೀತಿಯನ್ನೂ ನೀಡಿ, ಸ್ನೇಹ ಸಲುಗೆಗಳಿಗೆ ಅವಕಾಶ ಕಲ್ಪಿಸಿದ ದುರ್ಯೋಧನನನ್ನು ಕೊನೆಯುಸಿರು ಇರುವವರೆಗೂ ಪ್ರೀತಿಸುತ್ತಾ, ಆರಾಧಿಸುತ್ತಾ ಬಂದ. ಆವನ ಪ್ರೀತಿಯ ನಿಷ್ಠೆ, ಯಾವ ಆಮಿಷಗಳಿಂದಲೂ, ಸತ್ಯಾಂಶದ ಅರಿವಿನಿಂದಲೂ ಕಡಿಮೆಯಾಗಲಿಲ್ಲ.

ಪಂಪ, ಕುಮಾರವ್ಯಾಸರಿಬ್ಬರೂ ಕರ್ಣನ ಸ್ವಾಮಿನಿಷ್ಠೆ, ಮಿತ್ರ ಪ್ರೀತಿಗಳ ಔನ್ನತ್ಯಗಳನ್ನು ದರ್ಶಿಸಿದ್ದಾರಾದರೂ ಪಂಪನಲ್ಲಿ, ಕರ್ಣನ ವ್ಯಕ್ತಿತ್ವ ಮತ್ತಷ್ಟು ಉಜ್ವಲತೆಯೊಂದಿಗೆ ಕಾಣಿಸಿಕೊಂಡಿದೆ. ದುರ್ಯೋಧನ ಕರ್ಣನ ಅಪತ್ಕಾಲದಲ್ಲಿ ಅಪ್ಪಾಗಿ ಅವನಿಗೆ ಸಹಾಯ ಮಾಡಿ, ಅಂಗ ದೇಶದ ಅಧಿಕಾರವನ್ನೇ ವಹಿಸಿಕೊಟ್ಟು ಅವನಿಗೂ ಸಮಾಜದಲ್ಲಿ ಒಂದು ಪ್ರತಿಷ್ಠಿತವಾದ ನೆಲೆಯನ್ನು ಕಲ್ಪಿಸಿಕೊಡುವಲ್ಲಿ ಅವನದೂ ಸ್ವಾರ್ಥವಿತ್ತೆಂಬುದು ಸ್ಪಷ್ಟ. ಪಾಂಡವರ ಮೇಲಿದ್ದ ದ್ವೇಷ; ಶತ್ರುವಿನ ಶತ್ರು ತನಗೆ ಮಿತ್ರ ಎಂಬ ನೀತಿ ; ಕರ್ಣನು ಯಾರೆಂದು ತಿಳಿದಿದ್ದ ಕಾರಣ- ಹೀಗೆಲ್ಲವೂ ಸೇರಿ ಕರ್ಣನನ್ನು ಅಷ್ಟೊಂದು ಆತ್ಮೀಯವಾಗಿ ಪ್ರೀತಿಸಲು, ತನ್ನ ಸೋದರನಷ್ಟೇ ಸಲುಗೆಯಿಂದಿರಲು ಪ್ರಚೋದನೆ ದೊರೆತಿರಬೇಕು. ಉದ್ಯೋಗ ಪರ್ವದಲ್ಲಿ ಕರ್ಣ ವೃತ್ತಾಂತದ ವಿವರಗಳು ದೊರೆಯುತ್ತವೆ.

ಪಂಪನಲ್ಲಿ ದುರ್ಯೋಧನನಿಗೆ ಕರ್ಣನ ವಿವರಗಳು ತಿಳಿದ ಸಂದರ್ಭದ ಪ್ರಸ್ತಾಪವಿದೆ. ಕುಮಾರವ್ಯಾಸನಲ್ಲಿ ಅದು ಕಾಣುವುದಿಲ್ಲ.

ದುರ್ಯೋಧನ, ಕರ್ಣರ ಪ್ರೀತಿ ಅವಿಚ್ಛಿನ್ನವಾದ್ದು, ಅಭಿನ್ನವಾದ್ದು. ಮೇಲು ನೋಟಕ್ಕೆ, ಅತ್ಯಂತ ಆಶ್ಚರ್ಯವೆನಿಸುವಂತಹುದು.ಅವರ ಮಿತ್ರ ಪ್ರೀತಿಯಲ್ಲಿ ಆಪ್ತತೆಯಿದೆ.ಸಲುಗೆಯಿದೆ. ಒಬ್ಬರಿಗಾಗಿ ಒಬ್ಬರು ತ್ಯಾಗ ಮಾಡಬಲ್ಲ ಮನಸ್ಸಿದೆ ಎನಿಸುತ್ತದೆ. ಆದರೆ ಇವೆಲ್ಲವೂ ಕರ್ಣನ ಪ್ರೀತಿಯಲ್ಲಿನ ಆಭರಣಗಳಾಗಿವೆಯೇ ಹೊರತಾಗಿ ದುರ್ಯೋಧನನ ಪ್ರೀತಿಯಲ್ಲಿಲ್ಲ. ಒಮ್ಮೆ ಬೇಟೆಗೆಂದು ಹೋದಾಗ ಸತ್ಯಂತಪರೆಂಬ ಮುನಿಗಳಿಂದ ಕರ್ಣನ ಜನ್ಮ ವೃತ್ತಾಂತ ಮತ್ತು ಎಲ್ಲರಿಗೂ ಅವನೇ ಹಿರಿಯನೆಂಬ ವಿಷಯ ತಿಳಿಯುತ್ತದೆ. ಬಹುಶಃ ನಿರ್ಮಲವಾಗಿ ಇರಬಹುದಾಗಿದ್ದ ಪ್ರೀತಿಯ ಸುತ್ತ ಸ್ವಾರ್ಥದ ಹುತ್ತ ಬೆಳೆದು ಬಿಡುತ್ತದೆ. ಕರ್ಣನಿಂದ ತನಗೇನೂ ಅನ್ಯಾಯವಾಗಿಲ್ಲ. ಆದರೂ ಅವನು ಶತ್ರುಗಳಾದ ಪಾಂಡವ ರಕ್ತ ಹಂಚಿಕೊಂಡವನು.ಆದ್ದರಿಂದ ಒಂದು ರೀತಿಯಲ್ಲಿ ಅವನೂ ಶತ್ರುವೇ ! "ಮುಳ್ಳನ್ನು ಮುಳ್ಳಿನಿಂದಲೇ ತೆಗೆಯುತ್ತೇನೆ" ಎಂಬ ನಿರ್ಧಾರದ ಹಿನ್ನಲೆಯಲ್ಲಿ ಕರ್ಣ ಅವನ ಹೆಚ್ಚಿನಕೃಪೆಗೆ ಪಾತ್ರನಾಗುತ್ತಾನೆ. ಬಲಿಗೊಡಲಿರುವ ಕುರಿಯನ್ನು ಕೊಬ್ಬಿಸುವಂತೆ, ಕರ್ಣನನ್ನು ಚೆನ್ನಾಗಿ ಬೆಳೆಸುತ್ತಾನೆ.ಕರ್ಣನ ದುರ್ಯೋಧನನ ಸ್ನೇಹ, ಪ್ರೀತಿ, ಆತ್ಮೀಯತೆಗಳನ್ನು ಸಹಜವೆಂದೂ ಪ್ರಾಮಾಣಿಕವೆಂದೂ ನಂಬುತ್ತಾನೆ. ಆದ್ದರಿಂದಲೇ ದುರ್ಯೋಧನನ ಬಗ್ಗೆ ಅವನಿಗಿದ್ದ ಪ್ರೀತಿ, ನಿಷ್ಠೆಗಳು ಅಚಲವಾಗಿ ಉಳಿದು, ತಾನು ಯಾರೆಂಬ ಸತ್ಯಾಂಶ ತಿಳಿದರೂ ದುರ್ಯೋಧನನ್ನು ಬಿಟ್ಟುಕೊಡುವುದಿಲ್ಲ.

ಯುದ್ಧ ನಿರ್ಧಾರವಾಗುತ್ತದೆ. ಆ ಸಂದರ್ಭದಲ್ಲಿ ಕೃಷ್ಣ ಭೇದೋಪಾಯ ನೀತಿಯಿಂದ ಅಸಮ ಶೂರನಾದ ಕರ್ಣನನ್ನು ಪಾಂಡವ ಪಕ್ಷಕ್ಕೆ ಸೇರಿಸಲು ಪ್ರಯತ್ನಿಸುತ್ತಾನೆ. ಎಂದೂ ಪ್ರೀತಿಯಿಂದ ಬಂದು ಕರ್ಣನ ಮುಂದೆ ರಥವನ್ನು ನಿಲ್ಲಿಸಿ ಕರ್ಣನನ್ನು ತನ್ನ ಜೊತೆ ಬರಲು ಆಹ್ವಾನಿಸುತ್ತಾನೆ.ಸ್ವಲ್ಪ ದೂರ ಹೋಗಿ ರಥವನ್ನು ನಿಲ್ಲಿಸಿ ಅವನನ್ನು ಆಪ್ತವಾಗಿ, ಸಲುಗೆಯಲ್ಲಿ ಮಾತನಾಡಿಸಲು ಕರ್ಣನಿಗೆ ಏಕ ಕಾಲಕ್ಕೆ ಭಯವೂ ಆಶ್ಚರ್ಯವೂ ಆಗುತ್ತದೆ. ತಾನು ಸಂತ ವಿಧೇಯನು ಹೀಗೆ ಇಷ್ಟೊಂದು ಸಲುಗೆ ಸಲ್ಲದೆನಲು. ಕೃಷ್ಣನು ಮೆಲ್ಲನೆ ಅವನ ಜನ್ಮ

ರಹಸ್ಯವನ್ನು ಅನಾವರಣಗೊಳಿಸುತ್ತಾನೆ. ನಿನಗೆ ನಿನ್ನ ವಂಶದ ಓರಿಮೆ ತಿಳಿದಿಲ್ಲ. ಅನ್ಯಾಯವಾಗಿ ದುರ್ಯೋಧನನಲ್ಲಿ ಸೇವಕ ವೃತ್ತಿ ಮಾಡುತ್ತಿದ್ದೀಯ ಕುಂತಿ ಪಡೆದಿದ್ದ ಐದು ಮಂತ್ರಗಳಲ್ಲಿ ಮೊದಲ ಮಂತ್ರದಿಂದ ಹುಟ್ಟಿದವನು ನೀನು. ಉಳಿದವರೆಲ್ಲ ನಂತರ ಹುಟ್ಟಿದರು. ಆದ್ದರಿಂದ ಪಾಂಡವ ಹಿರಿಯ ನೀನಾಗಿ ರಾಜ್ಯಭಾರ ವಹಿಸಿಕೊಂಡು ತಮ್ಮಂದಿರನ್ನು ಸಲಹು.ಅವರೆಲ್ಲ ನಿನ್ನ ನೆರವಿಗಿರುತ್ತಾರೆ. ಎಂದು ಹೇಳಿದ್ದನ್ನು ಕೇಳಿ ಕರ್ಣನಿಗೆ ಸಂತೋಷದ ಬದಲು ದುಃಖ, ಉಮ್ಮಳಗಳು ಹೆಚ್ಚಾಗುತ್ತವೆ.ಸತ್ಯವನ್ನು ತಿಳಿಸಿ ಸಂದಿಗ್ಧದಲ್ಲಿ ಸಿಲುಕಿಸಿದನೇ ಹೊರತಾಗಿ ತನಗೆ ಇದರಿಂದ ಯಾವ ಪ್ರಯೋಜನವೂ ಇಲ್ಲವೆನಿಸುತ್ತದೆ. ಕೃಷ್ಣನು ಬಯಸುವಂತೆ ಪಾಂಡವರನ್ನು ಕಾಯುವುದು ಸಾಧ್ಯವಿಲ್ಲ. ಒಂದು ವೇಳೆ ಕೃಷ್ಣನಿಗೆ ತಾನು ಪಾಂಡವರ ಕಡೆ ಬರಬಹುದೆಂಬ ಭರವಸೆ ಇದ್ದರೆ, ಅದು ಅವನ ಭ್ರಮೆ. ಆದ್ದರಿಂದ ಕರ್ಣ ಸ್ಪಷ್ಟವಾಗಿ, ಮರುಳು ಮಾಧವ, ನಾನು ರಾಜ್ಯದಾಸೆಗೆ ಒಳಗಾಗುವವನಲ್ಲ. ಸತ್ಯ ಹೇಳಿ ಅನ್ಯಾಯವಾಗಿ ಕೌರವನ ಕೊಂದೆ. ಶತ್ರುಗಳ ಶಿರಗಳನ್ನು ಚೆಂಡಾಡಿ ತಂದೊಪ್ಪಿಸುವೆನೆಂದಿದ್ದೆ. ಆದರೆ ನನ್ನ ಪಾಂಡವರ ಸಂಬಂಧವನ್ನು ಹೇಳಿ ಮನಸ್ಸನ್ನು ದುರ್ಬಲಗೊಳಿಸಿದೆ. ಆದರೂ ದುರ್ಯೋಧನನಲ್ಲದೆ ನನಗೆ ಈ ಲೋಕದಲ್ಲಿ ಆಪ್ತರೆಂಬುವರಿಲ್ಲ. ನನ್ನನ್ನು ಪ್ರೀತಿ, ಗೌರವಗಳಿಂದ ಸಾಕಿ ಸಲಹಿದ ಅವನಿಗೆ ಅನ್ಯಾಯವನ್ನು ಕನಸಿನಲ್ಲಿಯೂ, ಮಾಡಲಾರೆ. ಒಂದು ವೇಳೆ ನಿನ್ನ ಮಾತಿಗೆ ಮರುಳಾಗಿ ಬಂದೆನಾದರೆ ಲೋಕ ಮೆಚ್ಚುವುದೇ ? ಎಂಬ ಪ್ರಶ್ನೆಗೆ, ಕರ್ಣನ ದೃಢತೆಗೆ ತಲೆದೂಗಿ, ತನ್ನ ಮಾತಿನಿಂದ ಪ್ರಭಾವಿತನಾಗಿ ಬರಲಾರನೆಂದು ಖಚಿತವಾದರೂ, ಕುಂತಿಯ ಮೂಲಕವೂ ಪ್ರಯತ್ನಿಸುವುದೆಂದು ನಿರ್ಧರಿಸಿ ಹಿಂತಿರುಗುತ್ತಾನೆ. ಪ್ರತಿ ನಿತ್ಯ ಸೂರ್ಯನಿಗೆ ಅರ್ಘ್ಯವೀಯಲು ಕರ್ಣ ಬರುವುದನ್ನು ಅರಿತಿದ್ದು ಕುಂತಿಯನ್ನು ಆ ಸಮಯಕ್ಕೆ ಹೋಗೆಂದು ಸೂಚಿಸುತ್ತಾನೆ. ಇಂದ್ರನು ಇಂತಹದೇ ಸಮಯದಲ್ಲಿ ಬಂದು ಕರ್ಣನ ದೇಹದೊಂದಿಗೇ ಜನ್ಮಾರಭ್ಯ ಅಂಟಿಕೊಂಡಿದ್ದ ಕವಚ ಕುಂಡಲಗಳನ್ನು ಬ್ರಾಹ್ಮಣ ವೇಷದಲ್ಲಿ ಬಂದು ಮೋಸದಿಂದ, ದಾನವಾಗಿ ಪಡೆದಿದ್ದಾನೆ. ಯಾರೇ ಏನೇ ಕೇಳಿದರೂ ದಾನ ಶೂರನಾದ ಕರ್ಣ ಒಲ್ಲೆ ಎನ್ನುವುದಿಲ್ಲ. ಆದ್ದರಿಂದ ಇದೇ ಸರಿಯಾದ ಸಮಯವೆಂದು

ಸೂಚಿಸುತ್ತಾನೆ.ಕೃಷ್ಣನ ಮಾತಿನಂತೆಯೇ ಕುಂತಿ ಕರ್ಣನಲ್ಲಿಗೆ ಬರುತ್ತಾಳೆ. ಅದೇ ಸಮಯಕ್ಕೆ ಗಂಗೆ ನಾರೀ ವೇಷದಲ್ಲಿ ಬಂದು ಕುಂತಿಗೆ' ನೀನು ಕೈಯೆಡೆಯಾಗಿ ನೀಡಿದ್ದ ನಿನ್ನ ಕಂದನನ್ನು ಇನ್ನು ನೀನು ಒಪ್ಪಿಸಿಕೋ ಎಂದು ಹೇಳಿ ಹೊರಟು ಹೋಗುತ್ತಾಳೆ. ಅವಳು ಅತ್ತ ಹೋಗುತ್ತಿದ್ದಂತೆ ಸೂರ್ಯನು ಬಂದು ಕರ್ಣನನ್ನು ಪಕ್ಕಕ್ಕೆ ಕರೆದು 'ಮಗು ಕುಂತೀ ನಾರಿ ನಿನ್ನ ತಾಯಿಯಾಗಿದ್ದಾಳೆ. ಆದರೆ ಈಗ ನಿನ್ನಿಂದ, ಕೃಷ್ಣನ ಅಭಿಮತದಂತೆ 'ವರಳ ಬೇಡಲು ಬಂದಿದ್ದಾಳೆ' ಇಂದ್ರನಿಗೆ ಕವಚವನ್ನು ಕೊಟ್ಟು ಮರುಳಾದಂತೆ ಆಗಬೇಡ. ಎಚ್ಚರದಿಂದಿರು' ಎಂದು ಬುದ್ಧಿ ಹೇಳಿ ಹೋಗುತ್ತಾನೆ. ಕರ್ಣ ಸೂರ್ಯನಿಗೆ ಕೃತಜ್ಞತೆಯನ್ನು ತಿಳಿಸಿ, ಕುಂತಿಯತ್ತ ಮರಳಿ ಬಂದು ಅವಳಿಗೆ ನಮಸ್ಕರಿಸಿ, ಬಂದ ಕಾರಣವೇನೆಂದು ಬೆಸಗೊಳ್ಳುತ್ತಾನೆ. ಆಕೆ ಬಂದದ್ದು ತನಗೆ ಅಪಾರ ಸಂತೋಷವಾದದ್ದೇ ಅಲ್ಲದೆ, ಅವಳ ಬರವಿನಿಂದ ಒಮ್ಮಲೇ ತನ್ನಲ್ಲಿ 'ಚಲಮುಂ ಚಾಗಮುಂ ಅಳವುಂ ಕಲಿತನಮುಂ, ಕುಲಮುಂ ಬಂದು ನೆಲೆಸಿದಂತಾಗಿದೆಯೆನ್ನುತ್ತಾನೆ. ತನ್ನನ್ನು ಮಗನೆಂದು ಒಪ್ಪಿಕೊಂಡುದೇ ಇಂತಹ ಭಾವನೆ ಬರಲು ಕಾರಣವೆಂದು ತಿಳಿಸುತ್ತಾನೆ. ತನ್ನ ಈ ದೇಹ (ಒಡಲು) ತಂದೆ ತಾಯಿಗಳಿಂದ ಕೈಯೆಡೆಯಾಗಿ ಬಂದಿದೆ. ಆದ್ದರಿಂದ ಅವರು ಅದನ್ನು ಬೇಡಿದಾಗ ಕೊಡುವುದು ತನ್ನ ಧರ್ಮವಾಗಿರುವುದರಿಂದ, ಅವಳು ತನ್ನಿಂದ ಏನು ಬೇಕಾದರೂ ಬೇಡಬಹುದೆಂದು ತಿಳಿಸುತ್ತಾನೆ.

ಮಗು ಯಾವುದೇ ಸಂಕೋಚ, ಹಿಂಜರಿಕೆಗಳಿಲ್ಲದೆ ನೀಡಲು ನೀನು ಮುಂದಾಗಿದ್ದೀಯ. ನಾನೂ ನಿನ್ನನ್ನು ಹೆತ್ತವಳಾಗಿದ್ದೀನಿ. ನಿನ್ನನ್ನು ನಂಬಿದ ನಿನ್ನ ಅನುಜರು ನಿನ್ನ ಸೇವೆ ಮಾಡಲು ಸಿದ್ಧರಾಗಿ ನಿಂತಿದ್ದಾರೆ.ನೀನು ಅವರ ಬಯಕೆಯಂತೆ ರಾಜ್ಯವನ್ನೊಪ್ಪಿಕೊಂಡು ಆಳುವುದು ನಿನ್ನ ಅರಸ ದುರ್ಯೋಧನನ ಪ್ರೀತಿಯನ್ನೇ ನೆಚ್ಚಿಕೊಂಡು ಅವನ ಆಳಿಗದಲ್ಲಿ ಇರುವುದೇ ?' ಎಂದು ಹೇಳಿ ಅವನನ್ನು ಒಲಿಸಲು ಪ್ರಯತ್ನಿಸುತ್ತಾಳೆ. ಆದರೆ ಕರ್ಣ ಈ ಬಾರಿಯೂ, ತನ್ನ ಹೆತ್ತ ತಾಯಿ ಎಂದು ತಿಳಿದ ಮೇಲೂ, ಅವರ ಮಾತಿಗೆ ಬಲಿ ಬೀಳದೆ ತನ್ನ ಸ್ವಾಮಿ, ಗೆಳೆಯ ಹಿತಚಿಂತಕ ಎಂದು ನಂಬಿ ನಡೆದುಕೊಂಡ ನಿಷ್ಠೆಗೆ ಮಸಿ ಬಳಿಯಲು ಆಲೋಚಿಸುವುದಿಲ್ಲ. ಭಕ್ತಿ, ನಿಷ್ಠೆ ಔದಾರ್ಯ, ಪ್ರೀತಿ

ವಿಶ್ವಾಸವೆಂಬ ಮೌಲ್ಯಗಳನ್ನು ಅತಿಯಾಗಿ ನೆಚ್ಚಿಕೊಂಡವನು.ನಶ್ವರವಾದ ಸಿರಿ ಸಂಪತ್ತು, ರಾಜತ್ವ ಅಧಿಕಾರ ಯಾವುದೂ ಅವನಿಗೆ ಅನ್ನದ ಋಣ, ಮಿತ್ರ ಋಣದ ಮುಂದೆ ಕ್ಷುಲ್ಲಕವೆನಿಸುತ್ತದೆ.ಅವನ ದೃಷ್ಟಿಯಲ್ಲಿ ಭಯ, ಲೋಭಗಳೆರಡೂ ಪಾಪವೇ. ಆದ್ದರಿಂದ ಸಾಯುವ ಹೆದರಿಕೆಯಿಂದ, ತಮ್ಮಂದಿರೆಂಬ ಕಾರಣ ದಿಂದ, ಸಮಸ್ತ ರಾಜ್ಯವೂ ತನ್ನದಾಗುವುದೆಂಬ ಲೋಭದಿಂದ ವಿಚಲಿತನಾಗಲಿಲ್ಲ.ಭಯ,ಲೋಭಗಳಿಗೆ ಪಕ್ಕಾಗಿ ತನ್ನಾಳ್ದನು (ದುರ್ಯೋಧನ) ತನಗೆ ಮಾಡಿದ ಉಪಕಾರವನ್ನು ಮರೆತು ಬಾಳಲು, ಈ ದೇಹವೇನೂ ಕೀರ್ತಿಗಿಂತ ಶಾಶ್ವತವಲ್ಲ. ಆದ್ದರಿಂದ ಬದುಕುಳಿದು ತನ್ನ ಒಡಲನ್ನು ರಕ್ಷಿಸಿಕೊಳ್ಳಬೇಕಾದ ಅಗತ್ಯವಿಲ್ಲ.' ಎಂದು ಕುಂತಿಗೆ ಮಾರುತ್ತರಿಸುತ್ತಾನೆ. ಅಲ್ಲದೆ, "ನಾನು ಯಾರೆಂದು ತಿಳಿಯದೆ ಬೆಸ್ತರವನಾಗಿಯೂ ತನ್ನ ಗುಣಗಳಲ್ಲಿ ಒಂದನ್ನೂ ಬಿಟ್ಟುಕೊಡಲಿಲ್ಲ. ಹಾಗಿರುವಾಗ ನಾನು ಯಾರೆಂದು, ಕುಂತಿಯ ಮಗನೆಂದು ತಿಳಿದ ಮೇಲೆ ನನ್ನ ಗುಣ ನಂಬಿಕೆಗಳನ್ನು ಬಿಟ್ಟು ಬಿಡುವುದು ಎಷ್ಟು ಉಚಿತ ?" ಎಂದು ಪ್ರಶ್ನಿಸುತ್ತಾನೆ;

ಕರ್ಣನ ಧೋರಣೆ, ಅಚಲ ನಿರ್ಧಾರಗಳನ್ನು ಪ್ರತ್ಯಕ್ಷವಾಗಿ ನೋಡಿದ ಕುಂತಿಗೆ ತನ್ನಿಂದಲೂ ಅವನನ್ನು ತಮ್ಮಡೆಗೆ ಸೆಳೆದುಕೊಳ್ಳಲು ಆಗುವುದಿಲ್ಲವೆಂದು ತಿಳಿದಾಗ, ಇನ್ನು ತಮ್ಮ ವಂಶದ ಅವಸಾನ ಕಟ್ಟಿಟ್ಟದ್ದು. ತನಗೆ ತನ್ನ ಮಕ್ಕಳಾಸೆ ಇನ್ನೆಲ್ಲಿ ಸಾಧ್ಯ ? ಎಂದು ಹೇಳುತ್ತ ಒಂದೇ ಸಮನೆ ಅಳುವುದಕ್ಕೆ ತೊಡಗುತ್ತಾಳೆ. ಅವಳ ದುಃಖ, ಶೋಕಾರ್ತತೆಗೆ ಕರ್ಣ ತನ್ನ ಬಿಗುವನ್ನು ಸಡಿಲಿಸುವನಾದರೂ ಸ್ವಾಮಿ ದ್ರೋಹ, ಮಿತ್ರ ದ್ರೋಹಕ್ಕೆ ಎಡೆಯಾಗದಂತೆ, ಅರ್ಜುನನ ಹೊರತು ಇನ್ನಾರ ಮೇಲೂ ಶಸ್ತ್ರ ಅಥವಾ ಬಾಣ ಪ್ರಯೋಗ ಮಾಡುವುದಿಲ್ಲ. ಉಳಿವುದಾವರೆ ನಾನೋ ಅರ್ಜುನನೋ ! ಒಟ್ಟಿನಲ್ಲಿ ನೀನು ಬಯಸುವಂತೆ ನಿನ್ನೈದು ಮಕ್ಕಳು ನಿನಗೆ ಉಳಿಯುತ್ತಾರೆ. ಎಂದು ಹೇಳಿ ಛಲ, ಚಾಗ, ಕುಲ, ಸತ್ಯವೆಂಬ ಮೌಲ್ಯಗಳಿಗೆ ರಾಧೇಯ ಆಧೇಯನಾಗಿ ಉಳಿಯುತ್ತಾನೆ.

ಹೀಗೆ ತಾಯಿ ಕರ್ಣನ ಪ್ರೀತಿಯಲ್ಲಿ, ತಾಯಿಯ ಸ್ವಾರ್ಥವೇ ಮುಂದಾಗುತ್ತದೆ.ಹೆತ್ತ ವಾತ್ಸಲ್ಯದ ತುಡಿತವೇ ಇಲ್ಲದೆ ಇಷ್ಟು ವರ್ಷಗಳೂ

ಅವನಿಂದ ದೂರವಾಗಿ, ಅಜ್ಞಾತವಾಗಿ ಇದ್ದ ಕುಂತಿ, ಕೃಷ್ಣನು ಕರ್ಣನನ್ನು ನೋಡಲು ಆದೇಶಿಸಿದಾಗ ಸ್ವಲ್ಪವೂ ವಿರೋಧಿಸುವುದಿಲ್ಲ. ಪ್ರಪ್ರಥಮ ಬಾರಿಗೇ ಕಾಣುತ್ತಿರುವಾಗ ಅವನಿಂದ ಅವನ ಪ್ರಾಣಕ್ಕೆ ಹಾನಿಬರಬಹುದಾದ ರೀತಿಯ ವಚನವನ್ನು ಪಡೆಯುವುದು ತಾಯಿಯಾದವಳಿಗೆ ಎಷ್ಟು ಸಮಂಜಸ ?

ದುರ್ಯೋಧನ ಕರ್ಣನನ್ನು ಪ್ರೀತಿಸುವಲ್ಲಿ, ಅವನಿಗೆ ಉಪಕರಿಸುವಲ್ಲಿ ಯಾವುದೇ ಔದಾರ್ಯ ಅನುಕಂಪ ಮೆಚ್ಚುಗೆಗಳಿಲ್ಲ. ಪಾಂಡವರ ಮೇಲಿನ ಜಿದ್ದು, ತನಗೆ ತಿಳಿದ ಜನ್ಮ ರಹಸ್ಯ, ಕರ್ಣನನ್ನು ಇಷ್ಟು ಅತಿಯಾಗಿ ಪ್ರೀತಿಸುವಂತೆ ಮಾಡುತ್ತವೆ. ಅವನ ಪ್ರೀತಿಯಲ್ಲಿ ಸ್ವಾರ್ಥವಿದೆ; ಸೇಡಿದೆ.ಆದರೆ ಕರ್ಣನ ಪ್ರೀತಿ ಅಪ್ಪಟ ಚಿನ್ನ. ಅವನ ಪ್ರೀತಿಯಲ್ಲಿ ಕೃತಜ್ಞತೆಯಿದೆ; ನಿಷ್ಠೆಯಿದೆ; ತ್ಯಾಗ ಮನೋಭಾವವಿದೆ. ಕೃತಕತೆಯ ಸೋಂಕಿಲ್ಲ; ಸ್ವಾರ್ಥದ ಗಂಧವೂ ಇಲ್ಲ; ಪ್ರೀತಿ, ಸ್ನೇಹಗಳ ನಟನೆಯಿಂದ ದುರ್ಯೋಧನನನ್ನು ಲೂಟಿ ಮಾಡಬೇಕೆಂಬ ಉದ್ದೇಶವೂ ಇಲ್ಲ.ಇದು ನಿಜವಾದ ಪ್ರೀತಿ.ಅದಕ್ಕೆ ಕರ್ಣನ ದುರ್ಯೋಧನನ ಬಗೆಗಿನ ಪ್ರೀತಿ, ಸ್ನೇಹ ನಿಷ್ಠೆಗಳನ್ನು ನಮ್ಮ ಕವಿಗಳು ಎತ್ತಿ ತೋರಿಸಿ ಹಾಡಿ ಹೊಗಳಿರುವುದು.ಮಹಾಭಾರತ ಗಂಭೀರವಾಗಿ ಓದಿದಾಗ, ಪಂಪನೆಂದಂತೆ 'ಕರ್ಣರಸಾಯನಮೇ !'

ಶಕುನಿ ದುರ್ಯೋಧನನನ್ನು ಪ್ರೀತಿಸಿದ್ದೇನೋ ನಿಜ.ಆದರೆ ಪ್ರೀತಿಯಿಂದ ಅವನ ದುರ್ಗುಣಗಳನ್ನು ತಿದ್ದಿ, ಬುದ್ಧಿವಾದ ಹೇಳಿ ಸರಿದಾರಿಗೆ ಹಚ್ಚದೆ, ಅವನ ಅಪರಾಧ, ಅಹಂಕಾರಗಳನ್ನು ದ್ವೇಷಾಸೂಯೆಗಳನ್ನು ಬೆಂಬಲಿಸುತ್ತಾ ಹೋಗಿ ಕಡೆಗೆ ತನ್ನ ಕಣ್ಣನ್ನು ತಾನೇ ಚುಚ್ಚಿಕೊಳ್ಳುವಂತೆ, ದುರ್ಯೋಧನ ಶಕುನಿಯ ಬೆಂಬಲ ಪ್ರೋತ್ಸಾಹಗಳಿಂದ ತಾನೇ ತನ್ನ ವಂಶದ ತನ್ನ ವೈಯುಕ್ತಿಕ ವಿನಾಶಕ್ಕೆ ಕಾರಣನಾದ. ಕುರುಕ್ಷೇತ್ರದಂತಹ ಮಹಾ ಸಂಗ್ರಾಮದ ಬೆಂಕಿಯನ್ನು ಉರುಬಿ ಮನುಷ್ಯ ಭಾವನೆಗಳನ್ನು ಸುಟ್ಟು ಹಾಕಿದ, ಧೃತರಾಷ್ಟ್ರ ಕಣ್ಣಿಂದ ಮಾತ್ರ ಕುರುಡನಾಗದೆ ಪುತ್ರ ಪ್ರೀತಿ, ಮೋಹದಿಂದಲೂ ದುರ್ಯೋಧನನ ನಡತೆ, ನಡವಳಿಕೆಗಳನ್ನು ತಿದ್ದಲು ಹೋಗಲಿಲ್ಲ. ಅವನ ಅಕಾರ್ಯಗಳನ್ನು ಪ್ರಶ್ನಿಸಲಿಲ್ಲ ಪ್ರತ್ಯಕ್ಷವಾಗಿ,

ಪರೋಕ್ಷವಾಗಿ ಪ್ರೋತ್ಸಾಹಿಸುತ್ತಲೇ ನಡೆದ. ಗಾಂಧಾರಿಯೂ ಇದೇ ರೀತಿ ಪ್ರೀತ್ಯಂಧಳಾಗಿದ್ದಳು.ಹೀಗೆ ಪ್ರೀತಿ ಅನೇಕ ರೀತಿಯ ದುರಂತಗಳಿಗೆ ದಾರಿ ಮಾಡಿತು.

ಸ್ನೇಹ ಮೂಲದಿಂದ ಪ್ರೀತಿ ಹುಟ್ಟುತ್ತೆ. ಬೆಳೆಯುತ್ತೆ; ಗಾಢವಾಗುತ್ತೆ. ಆದರೆ ಮನುಷ್ಯ ಸ್ವಭಾವಗಳು ಸಮಯ ಸಂದರ್ಭ, ಸನ್ನಿವೇಶಗಳಿಂದಾಗಿ, ಹೊರಗಿನ ವ್ಯಕ್ತಿ, ಪರಿಸ್ಥಿತಿಗಳಿಂದ ಪ್ರೇರಿತವಾಗಿ, ಬದಲಾಗುತ್ತವೆ. ಈ ಬದಲಾವಣೆ ಒಳ್ಳೆಯ ಪರಿಣಾಮಗಳಲ್ಲಿ ಪರ್ಯವಸಾನವಾಗಬಹುದು ಇಲ್ಲವೇ ದುರಂತದ ಪರಿಣಾಮಗಳಲ್ಲಿ ನಿಲ್ಲಬಹುದು.

ಪ್ರೀತಿಯ ಸಂಬಂಧಗಳಲ್ಲಿ ಗಂಡು-ಹೆಣ್ಣಿನ ಸಂಬಂಧಗಳೇ ಪ್ರಮುಖವಾದುದು.ಇಡೀ ಜಗತ್ತಿನ ಸಾಹಿತ್ಯವನ್ನು ಗಮನಿಸಿದಾಗ ಗಂಡು-ಹೆಣ್ಣಿನ ಪ್ರೀತಿಯ ಸುತ್ತ ಹೆಣೆದ ಕಥಾನಕಗಳೇ ಅಪಾರ ಸಂಖ್ಯೆಯಲ್ಲಿ ಸ್ವಲ್ಪ ಏರುಪೇರಾದರೂ ಸಾಕು, ದ್ವೇಷ, ಯುದ್ಧ, ಸಾವೂ, ನೋವುಗಳಿಗೆ ಕೊನೆಯಿಲ್ಲವಾಗುತ್ತದೆ. ಅನ್ಯೋನ್ಯ ದಾಂಪತ್ಯದ ಪರಿಧಿಯೊಳಗೇ ಉಳಿವ ಪ್ರೀತಿಯಿಂದ ಯಾವ ಸಮಸ್ಯೆಗಳೂ ಬರುವುದಿಲ್ಲ.ಆದರೆ 'ಪ್ರೀತಿ' ದಾಂಪತ್ಯದ ಎಲ್ಲೆಗಳನ್ನು ಮೀರಿ ವಿವಾಹ ಬಾಹಿರ ಸಂಬಂಧಗಳಿಗೆ ವಿಸ್ತರಿಸಿದಾಗ ಕೊಲೆಗಳು, ಸಾವುಗಳು, ಸಮರಗಳು ಅನಿವಾರ್ಯವಾಗಿ ಬಿಡುತ್ತವೆ. ರಾಷ್ಟ್ರ ಪ್ರೀತಿ, ಸ್ವಾಮಿ ಪ್ರೀತಿ, ಮಿತ್ರ ಪ್ರೀತಿ, ಭ್ರಾತೃ ಪ್ರೀತಿ, ಮಾತೃಪ್ರೀತಿ ಇತ್ಯಾದಿ ನೆಲೆಗಳಲ್ಲಿ ನಿಸ್ವಾರ್ಥತೆ, ತ್ಯಾಗಗಳು ಇದ್ದಂತೆ, ಅಲ್ಲಿ ಸ್ವಲ್ಪ ವ್ಯತ್ಯಾಸಗಳಾದಲ್ಲಿ, ಸ್ವಾರ್ಥ, ದ್ರೋಹ, ವಂಚನೆಗಳು ಕೂಡಿಕೊಳ್ಳುತ್ತವೆ.

ಪ್ರೀತಿಗೆ ಅದ್ಭುತ ಶಕ್ತಿ ಇದೆ.ಅಖಂಡ ಶಕ್ತಿಯಿದೆ.ಶುದ್ಧವಾದ, ಪವಿತ್ರವಾದ ಪ್ರೀತಿ, ಪ್ರೀತಿಸುವವರಲ್ಲಿ ಭೀಮ ಬಲವನ್ನು, ಸಹನ ಶಕ್ತಿಯನ್ನು, ಎದುರಾಗುವ ಎಲ್ಲ ಬಗೆಯ ಕಷ್ಟ ಪರಂಪರೆಗಳನ್ನು ಮೀರಿ ನಿಲ್ಲುವ ಶಕ್ತಿಯನ್ನು ನೀಡುತ್ತದೆ. ಪ್ರೀತಿಯಿಂದ ಜಗತ್ತನ್ನೇ ಗೆಲ್ಲಬಹುದು.ಜಗತ್ತನ್ನು ಏಕಸೂತ್ರದಲ್ಲಿ ತರಬಹುದಾದ ಸಾಮರ್ಥ್ಯವೂ ಇದೆ. ಪ್ರೀತಿ ಅನ್ನುವುದೂ ಒಂದು ಆನಂದ ಸ್ಥಿತಿ. ಪ್ರೀತಿ ಇದ್ದಲ್ಲಿ ಕ್ಷುದ್ರ

ಭಾವನೆಗಳು ಇರಲು ಸಾಧ್ಯವಿಲ್ಲ. ಸಾವು, ನೋವು, ನರಳಿಕೆಗಳಿ
ಪ್ರೀತಿಯೊಂದೇ ಔಷಧಿ. ರವೀಂದ್ರರ ಪ್ರಕಾರ ಪ್ರೀತಿ ಕೇವಲ ಒಂದು
ಭಾವನೆಯಲ್ಲ. ಅದೊಂದು ಆಳವಾದ, ಆಪ್ತವಾದ ಅನುಭೂತಿ. 'ಗಾಂಧಿ
ಬುದ್ಧ, ಬಸವ ಎಲ್ಲರೂ ಬಯಸಿದ್ದು ಸಕಲ ಜೀವಿಗಳಲ್ಲಿ ಪ್ರೀತಿಯನ್ನು
ಪ್ರೀತಿ ಎಲ್ಲ ಅನುಭೂತಿ ಸ್ಥಿತಿಗಳಿಗಿಂತ ಶ್ರೇಷ್ಠವೆನಿಸಿದ್ದರಿಂದಲೇ ಮೋಕ್ಷವನು
ಅರಸಿ ಹೊರಟ ಬುದ್ಧ ಪ್ರೀತಿಯ ಬಂಧನದಲ್ಲಿ ಸಿಲುಕಿದ ಪ್ರೀತಿಯನು
ಬೋಧಿಸಿದ.

ಮೇಲೆ ಪ್ರೀತಿಯ ಬಗ್ಗೆ ಹೇಳಿರುವುದೆಲ್ಲ ನಿಜವೆಂದು
ನಂಬುತ್ತಲೇ, ಇಂತಹ ಅದ್ಭುತ ಅನುಭೂತಿಯಾದ 'ಪ್ರೀತಿ' ಯ ಆಳದಲ್ಲಿ
ಮನುಷ್ಯನ ಅಂತರಂಗದ ಯಾವ ಭಾವನೆಗಳು ಕೆಲಸ ಮಾಡುತ್ತವೆಯೋ
ಹೇಳುವುದಕ್ಕೆ ಆಗದ ರೀತಿಯಲ್ಲಿ ಸಾವು, ನೋವು, ಸೇಡು, ದ್ವೇಷ,
ಸ್ವಾರ್ಥಗಳಿಗೆ ದಾರಿ ಮಾಡಿದ್ದನ್ನು ನಮ್ಮ ಕಾವ್ಯ ಪರಂಪರೆಯಲ್ಲಿನ ಕೆಲವು
ಕಥಾ ಪ್ರಸಂಗಗಳ ಮೂಲಕವಾಗಿ ಕಾಣಿಸುವ ಪ್ರಯತ್ನ ಮಾಡಲಾಗಿದೆ.
ಇದರಿಂದ ಒಂದು ಸ್ಪಷ್ಟ, 'ಪ್ರೀತಿ' ಕೇವಲ ಒಂದು ಗುಣಾತ್ಮಕ
ಮೌಲ್ಯವಲ್ಲ. ಅದಕ್ಕೆ ಇನ್ನೂ ಕೆಲವು ಋಣಾತ್ಮಕ ನೆಲೆಗಳೂ ಇರುತ್ತವೆ.
ಎಂಬುದು.

★ ★ ★

ನೆಲೆ - ೧೨

# ಹಚ್ಚ ಹಸುಳೆಯನೆನ್ನನು ನೂಕಿಕೊಂದನು

ಪ್ರೀತಿ ಮೂಲವಾದ ಸಮಸ್ಯೆಗಳು ಹುಟ್ಟಿಕೊಳ್ಳುವುದು ಮತ್ತು ಸಮಸ್ಯೆ ಸಂಕೀರ್ಣ ರೂಪ ಪಡೆಯುವುದು ಮುಖ್ಯವಾಗಿ ಹೆಣ್ಣು ಗಂಡು ಪ್ರೀತಿಗೆ ಸಂಬಂಧಿಸಿದಂತೆ ! ಹೆಣ್ಣು ಗಂಡಿನ ನಡುವೆ ಪ್ರೀತಿ ಅನನ್ಯ. ಪವಿತ್ರ ಎಂದು ಉಳಿಯಬೇಕಾದರೆ ಇಬ್ಬರ ನಡುವೆಯೂ ಪರಸ್ಪರ ಪ್ರೀತಿ ಇರಬೇಕಾದ್ದು ಅನಿವಾರ್ಯ. ಪ್ರೀತಿ ಸಾರ್ಥಕವಾಗಬೇಕಾದರೆ, ಅರ್ಥ ಪಡೆದುಕೊಳ್ಳಬೇಕಾದರೆ ಇಬ್ಬರಿಂದಲೂ ಒಪ್ಪಿಗೆ ಇರಬೇಕಾಗುತ್ತದೆ. ಪರಸ್ಪರರಲ್ಲಿ ಒಪ್ಪಿಗೆ ಇಲ್ಲದಿದ್ದರೆ ಬಲಾತ್ಕಾರ ಅನಿವಾರ್ಯವಾಗಿ ಕಾಣಿಸಿಕೊಳ್ಳುತ್ತದೆ. ಈ ಬಲಾತ್ಕಾರ ಹೆಣ್ಣಿಂದ ಆಗಬಹುದು; ಗಂಡಿಂದಲೂ ಆಗಬಹುದು. ಆದರೆ ಪರಿಣಾಮ ಮಾತ್ರ ಭಯಂಕರ ದುರಂತದಲ್ಲಿ ಪರ್ಯವಸಾನವಾಗುತ್ತದೆ. ಸಾಮಾನ್ಯವಾಗಿ ಈ ಬಗೆಯ ಬಲಾತ್ಕಾರಗಳು ಗಂಡಿನಿಂದಲೇ ಆಗುವುದಾದರೂ, ಹೆಣ್ಣಿಂದಲೂ ಬಲಾತ್ಕಾರವಾದ ಸಂದರ್ಭಗಳು ನಮ್ಮ ಇತಿಹಾಸ ಪುರಾಣಗಳಲ್ಲಿ ಸಾಕಷ್ಟು ದೊರೆಯುತ್ತದೆ. ಊರ್ವಶಿ ಅರ್ಜುನನನ್ನು ಪ್ರೀತಿಗಾಗಿ ಯಾಚಿಸಿ, ದೊರೆಯದೆ ಹೋದುದಕ್ಕಾಗಿ ಬೃಹನ್ನಳೆ (ಶಿಖಂಡಿಯಂತೆ) ಯಾಗಲು ಶಪಿಸುತ್ತಾಳೆ. ಅಶೋಕನ ಮಡದಿ ತ್ರಿಶಲಾ ಕುಣಾಲನನ್ನು (ಮಗನನ್ನು) ಪ್ರೀತಿಸುವಂತೆ ಒತ್ತಾಯಿಸಿ, ಒಪ್ಪದಿರಲು ಅಶೋಕನಲ್ಲಿ ದೂರಿತ್ತು ಬಲಾತ್ಕಾರ ಮಾಡಿದನೆಂಬ ಆರೋಪದ ಮೇಲೆ ಕಣ್ಣು ಕೀಳಿಸುವ ಶಿಕ್ಷೆಗೆ ಗುರಿ ಪಡಿಸುತ್ತಾಳೆ. ಹೀಗೆ ಬೇಕಾದಷ್ಟು ಪ್ರಸಂಗಗಳು ನಮಗೆ ದೊರೆಯುತ್ತವೆ. ಅತಿಯಾಗಿ ಪ್ರೀತಿಸಿ, ಪ್ರೀತಿಸಿದವರು ತಮಗೆ ದಕ್ಕದೆ ಹೋದಾಗ ಅದರ ವಿನಾಶಕ್ಕೆ ಮುಂದಾಗುವ ಒಂದು ವಿಚಿತ್ರ ಮನಃಸ್ಥಿತಿ ಮನೋ ವೈಜ್ಞಾನಿಕ ವಿಶ್ಲೇಷಣೆಯಿಂದ ಮಾತ್ರ ಅರ್ಥವಾಗುತ್ತದೆ. ವಾಸ್ತವಾಗಿ ಶುದ್ಧ ಪ್ರೀತಿಯಾದಲ್ಲಿ, ತಾನು ಪ್ರೀತಿಸಿದವರ ಸುಖ ಸಂತೋಷಗಳನ್ನು ಬಯಸುತ್ತದೆ. ಆದರೆ ಈ ರೀತಿ ಪ್ರೀತಿಸಿದ್ದನ್ನೇ ಹೊಸಕಿ ಹಾಕುವ, ನಾಶಗೈಯುವ ಮನಃ ಸ್ಥಿತಿಯು ಹಿಂದಿನ ಪ್ರೀತಿ, ಪ್ರೀತಿ ಎನಿಸಿಕೊಳ್ಳುವುದಾದರೂ ಹೇಗೆ ಸಾಧ್ಯ? ಆದರೂ

ಇಂತಹ ಮನಸಿನ ವ್ಯಕ್ತಿಗಳಿಗೆ ಕೊರತೆಯಿಲ್ಲ. ಒಂದು ಬಗೆಯ ಈಡಿಪಸ್ ಕಾಂಪ್ಲೆಕ್ಸ್‌ನಿಂದ ನರಳುವ ವ್ಯಕ್ತಿಗಳ ಸಾಲಿನಲ್ಲಿ ಕ್ರಿ.ಶ. 1525 ರಲ್ಲಿದ್ದ ನಂಜುಂಡ ಕವಿ ಬರೆದ ಕುಮಾರರಾಮ ಸಾಂಗತ್ಯ (ಕುಮಾರರಾಮನ ಕಥೆ) ಕೃತಿಯಲ್ಲಿ ಬರುವ ರತ್ನಾಜಿ, ಬಹು ಪ್ರಮುಖವೆನಿಸುತ್ತಾಳೆ. ಕುಮಾರರಾಮ ರತ್ನಾಜಿ ಕಥೆ ತುಂಬ ಜನಜನಿತವಾಗಿದ್ದು, ಜನಪದರ ಅತಿ ಮೆಚ್ಚಿನ ಕಥೆಯಾಗಿದ್ದು, ಈ ಕಥೆ ಕುರಿತಾದ ಜನಪದ ಸಾಹಿತ್ಯ ಅಪಾರವಾಗಿದೆ. ರಾಮನಾಥನ ಶೌರ್ಯ, ಸಾಹಸ ಶುಚಿತ್ವಗಳನ್ನು ಕೊಂಡಾಡಿದ್ದೇ ಅಲ್ಲದೆ, ಚಿಕ್ಕಮ್ಮನಿಂದ ಅವನಿಗೆದುರಾದ ದುರಂತವನ್ನು ಹೃದಯ ಮಿಡಿಯುವಂತೆ ಚಿತ್ರಿಸಿದ್ದಾರೆ. ರತ್ನಾಜಿಯ ಬಗ್ಗೆಯೂ ಅನೇಕ ಜನಪದ ಹಾಡುಗಳಿವೆ. ದೊಂಬರ ಹುಡುಗಿಯಾಗಿದ್ದು, ಒಮ್ಮೆ ಕಂಪಿಲ ದೊರೆಯ ಮುಂದೆ ಅವಳ ದೊಂಬರಾಟವ ಪ್ರದರ್ಶನ ನಡೆದಾಗ ವಯಸ್ಸಾದ ಕಂಪಿಲ ದೊರೆ ಅವಳ ಆಟ, ಮಾಟ, ಸೌಂದರ್ಯಗಳಿಗೆ ಮಾರು ಹೋಗಿ ತನ್ನ ರಾಣಿಯನ್ನಾಗಿ ಮಾಡಿಕೊಂಡಿರುತ್ತಾನೆ. ರಾಮನಿಗೆ ಆಗಲೇ ಮದುವೆಯಾಗಿದ್ದು ಕುಮಾರ ರಾಮನಂತಹ ಮಗನೂ ಇರುತ್ತಾನೆ. ಆದರೂ ಕಿರಿಯ ಹೆಂಡತಿ ರತ್ನಾಜಿ ಅವನ ಪ್ರೀತಿಯ, ಮೋಹದ ಮಡದಿ. ಅವಳ ಪ್ರೀತಿಯಲ್ಲಿ ವಿವೇಕವನ್ನೇ ಕಳೆದುಕೊಂಡಿರುತ್ತಾನೆ. ರತ್ನಾಜಿಯಲ್ಲದೆ ಬೇರೆ ಯಾವ ಹೆಣ್ಣೂ ತನಗೆ ತಾಯಿ ಸಮಾನವೆಂದು ಭಾಷೆ ನೀಡಿ, ಪೂರ್ತಿಯಾಗಿ ಅವಳ ಪ್ರೀತಿಯಲ್ಲಿ ಮುಳುಗಿ ಹೋಗಿರುತ್ತಾನೆ.

ನಂಜುಂಡ ಕವಿ ಅವಳ (ರತ್ನಾಜಿ ) ಪೂರ್ವ ವೃತ್ತಾಂತವನ್ನೇನೂ ಪ್ರಸ್ತಾಪಿಸುವುದಿಲ್ಲವಾದರೂ ಸ್ವತಃ ಮಗನ ವಾವೆಯಲ್ಲಿದ್ದ ರಾಮನಾಥ ಅಥವಾ ಕುಮಾರರಾಮನನ್ನು ಒಲಿಸಿಕೊಳ್ಳಲು ನಡೆಸುವ ಪ್ರಯತ್ನವನ್ನು ಸಾಕಷ್ಟು ವಿವರಿಸಿದ್ದಾನೆ. ರತ್ನಾಜಿ ಮತ್ತು ಕುಮಾರರಾಮರ ನಡುವೆ ಪ್ರೀತಿ ಮತ್ತು ಮೌಲ್ಯಗಳ ಸಂಘರ್ಷ ನಡೆಯುತ್ತದೆ. ಕಂಪಿಲನ ಹಿರಿಯ ರಾಣಿ ಹರಿಯಲ ದೇವಿ.ಆಕೆಯ ಮಗನೇ ರಾಮನಾಥ. ಇವನು ಶೌರ್ಯ, ಸಾಹಸ, ಶುಚಿತ್ವಕ್ಕೆ, ಅದ್ಭುತ ಚೆಲುವಿಗೆ ಜನಾನುರಾಗಕ್ಕೆ ಸುತ್ತಮುತ್ತಲ ರಾಜ್ಯಗಳ ಜನರೆಲ್ಲ ಒಲಿದಿದ್ದು, ಕೆಲವು ಯುವಕರಂತೂ ಅವನ ಒಡನಾಟವಲ್ಲಿ ಇರಬಯಸಿ ಹೊಸಮಲೆದುರ್ಗಕ್ಕೆ ಬಂದು ನೆಲೆಸುತ್ತಾರೆ. ಕುಮಾರರಾಮನ ಕೀರ್ತಿ ರತ್ನಾಜಿಗೂ ತಿಳಿದಿರುತ್ತದೆ. ಅವನನ್ನು ಮದುವೆಯಾಗಬೇಕೆಂಬುದು ಅವಳ ಅಂತರ್ಯದ ಹೆಬ್ಬಯಕೆಯಾಗಿರುತ್ತದೆ.

ತಿಳಿದೂ, ತಿಳಿಯದೆಯೂ ಅವನನ್ನು ಅತಿಯಾಗಿ ಪ್ರೀತಿಸುತ್ತಾಳೆ. ಆದರೆ ಕಾರಣಾಂತರಗಳಿಂದ, ಕೆಲವು ಒತ್ತಾಯಗಳಿಂದ ಕಂಪಿಲ ದೊರೆಯ ಮಡದಿಯಾಗಬೇಕಾದ ಸನ್ನಿವೇಶ ಏರ್ಪಡುತ್ತದೆ. ರಾಣಿಯಾದರೇನು ? ತನ್ನ ಮನದ ಬಯಕೆಯನ್ನು ಹೇಗಾದರೂ ತೀರಿಸಿಕೊಳ್ಳ ಬೇಕೆಂಬುದು ಅವಳ ಹೆಗ್ಗುರಿಯಾಗಿದ್ದು ಅವಕಾಶಕ್ಕಾಗಿ ಕಾಯುತ್ತಿರುತ್ತಾಳೆ. ಯುವ ರಾಜನಾದರೂ ಒಮ್ಮೆಯೂ ಮುಖಾಮುಖಿ ಅವನನ್ನು ನೋಡಿ ಮಾತನಾಡಿಸುವ ಅವಕಾಶವೇ ದೊರೆಯುವುದಿಲ್ಲ.

ಶೌರ್ಯ, ಸಾಹಸಗಳ ಜೊತೆಗೆ ವಿನಯ, ವಿಧೇಯತೆಗಳೂ ಕೂಡಿ ಅವನ ವ್ಯಕ್ತಿತ್ವಕ್ಕೆ ಮತ್ತಷ್ಟು ಮೆರಗು ಬಂದಿತ್ತು. ಕೆಚ್ಚೆದೆಯ ಕಲಿಯಾಗಿ ಶತ್ರುಗಳನ್ನು ಸದೆಬಡಿದು ರಾಜ್ಯವನ್ನು ನಿಷ್ಕಂಟಕ ಮಾಡಿದ್ದ. ಯಾರೇ ಆದರೂ ಸ್ವಲ್ಪ ಕೆಣಕಿದರೆ, ಉದ್ಧಟರಂತೆ ವರ್ತಿಸಿದರೆ ಆ ಕೂಡಲೇ ಅವರ ಮೇಲೆ ಎರಗಿ ಬುದ್ಧಿ ಕಲಿಸಿ ಹಿಂತಿರುಗುತ್ತಿದ್ದ. ಮಾಂಡಳಿಕನಾಗಿದ್ದ ಹುಳಿಹೇರು ಗೌಡ, ಕಾಕತೀಯರುದ್ರ, ಅಲ್ಲಾವುದ್ದೀನ, ಸುರತಾಳ, ನೇಮಿ ಮೊದಲಾದವರು ರಾಮನ ಸಾಹಸದ ರುಚಿ ಕಂಡವರಲ್ಲಿ ಕೆಲವರಾಗಿದ್ದರು. ಇಂತಹ ಪರಾಕ್ರಮ ಶಾಲಿಯಾದ ರಾಮ ದಿಗ್ವಿಜಯಗಳ ಗರಿ ತೊಟ್ಟು ಬಂದ ಸಮಯದಲ್ಲಿ ವಸಂತಾಗಮನವೂ ಸೇರಿ ಸಂತೋಷ ಸಂಭ್ರಮಕ್ಕೆ ಕೋಡು ಮೂಡುತ್ತದೆ. ಜೊತೆಗೆ ಶೂಲದ ಹಬ್ಬವೂ ಅದೇ ಸಮಯಕ್ಕೆ ಬಂದುದರಿಂದ ರಾಜಕುಮಾರರೆಲ್ಲರೂ ದಿವ್ಯಾಲಂಕಾರ ಭೂಷಿತರಾಗಿ, ಶೂಲಗಳೊಂದಿಗೆ ಬಂದು ಸೇರಿದರು. ಕಂಪಿಲನ ಕಿರಿಯ ರಾಣಿ ರತ್ನಾಜಿ ತನ್ನ ಸಖಿ ಸಂಗಿ ಎಂಬವಳಿಂದ ಹಬ್ಬದ ವಿವರಗಳನ್ನು, ಅಲ್ಲಿ ನೆರೆದಿದ್ದ ತುಂಬು ಪ್ರಾಯದ, ಸುಂದರ ರಾಜಕುಮಾರರ ಪರಿಚಯವನ್ನೂ ಪಡೆದಳು.ಅವರೆಲ್ಲರ ನಡುವೆ ಅಪಾರ ಮನ್ಮಥನಂತೆ ಕಾಣಿಸುತ್ತಿದ್ದ ರಾಮನ ರೂಪು ಅವಳೆದೆಯಲ್ಲಿ ಶೂಲವಾಗಿ ನಾಟುತ್ತದೆ. ಹೇಗಾದರೂ ಅವನನ್ನು ತಂದು ತನ್ನ ಶಯ್ಯಾಗೃಹವನ್ನು ಹೊಗಿಸಬೇಕೆಂದು ಬೇಡುತ್ತಾಳೆ. "ನನ್ನ ಇಂದ್ರಿಯಗಳು ರಾಮನಿರುವೆಡೆಗೆ, ನಡೆ ನಡೆ ಎಂದು ಹಿಡಿದು ಎಳೆಯುತ್ತಿವೆ; ಅವನನ್ನು ತಂದುಕೊಟ್ಟು ನನಗೆ ಅಕ್ಕನಾಗುವೆಯೋ ಇಲ್ಲ ಅವನನ್ನು ತಾರದೆ ನನ್ನ ಕೊಂದು ನಿನ್ನ ಬಸಿರಲ್ಲಿ ಮಗುವಾಗಿ ಬರಿಸಿ ತಾಯಿಯಾಗುವೆಯೋ" ಎಂದು ಅಂಗಲಾಚುತ್ತಾಳೆ. ಅವಳ ಪ್ರೇಮೋತ್ಕಟತೆ, ಕಾಮೋತ್ಕಟತೆಗಳು. ಅವಳ ಬದುಕನ್ನು

ಅಸಹನೀಯವಾಗಿಸುತ್ತವೆ. ದಿನಗಳನ್ನು ಯುಗಗಳಂತೆ ಕಳೆಯುತ್ತಾಳೆ. ಅವಳ ವಿರಹಾಕುಲತೆ, ದೈನ್ಯತೆಗಳನ್ನು ನೋಡಲಾಗದೆ, ಸಂಗಿ ರಾಮನನ್ನು ಹೇಗಾದರೂ ಮಾಡಿ, ಸಾಧ್ಯವಾದರೆ ಕುಟಿಲ ವಿದ್ಯೆಯಿಂದಲಾದರೂ ಸರಿ, ತಂದೊಪ್ಪಿಸುವೆನೆಂದು ಭಾಷೆ ನೀಡುತ್ತಾಳೆ. ಆದರೆ ಅಲ್ಲಿಯವರೆಗೆ ಸ್ವಲ್ಪ ಮಟ್ಟಿನ ಮನಸ್ಸಮಾಧಾನಕ್ಕಾದರೂ ರಾಮನ ಭಾವಚಿತ್ರವನ್ನು ಬಗಲಲ್ಲಿ ಇರಿಸಿಕೊಂಡು, ಅದನ್ನೇ ರಾಮನೆಂದು ಭ್ರಮಿಸಿ, ಪ್ರೇಮಾತಿರೇಕದಲ್ಲಿ, ಮುದ್ದಾಡಿ, ಲಲ್ಲೆ ಮಾಡಿ ಸರಸವಾಡಿ ದಣಿಯುತ್ತಾಳೆ ; ಮತ್ತಷ್ಟು ವಿರಹಾಕುಲಳಾಗಿ ಚಡಪಡಿಸುತ್ತಾಳೆ. ಕಾಮಾಂಧನಾದ ದೊರೆ ಮಡದಿಯ ಈ ಸ್ಥಿತಿಗೆ ಕಾರಣವೇನೆಂದು ಊಹಿಸದಾಗುತ್ತಾನೆ. ಅನ್ಯ ರಾಣಿಯರ ಕುಹಕ, ಕಟಕಿಗಳೇ ಕಾರಣವೆಂದ ರತ್ನಾಜಿಯ ಸುಳ್ಳನ್ನೇ ನಂಬಿ ಅವಳನ್ನು ತಣಿಸಲು ಅಗ್ರಮಹಿಷಿಯಾಗಿಸುವುದಾಗಿ ಮಾತು ಕೊಡುತ್ತಾನೆ.

ಕುಟಿಲ ದೇವತೆಗಳ ಕೈವಾಡವೋ, ವಿಧಿ ಲಿಖಿತವೋ ಎಂಬಂತೆ, ಕಾಡು ಮೃಗಗಳಿಂದ ಅಪಾಯಕ್ಕೆ ಒಳಗಾಗಿದ್ದ ಬೇಡರನ್ನು ರಕ್ಷಿಸಲು, ಕ್ರೂರ ಮೃಗಗಳನ್ನು ಬೇಟೆಯಾಡಲು ಹೋಗಬೇಕಾಗಿದ್ದ ರಾಮ, ಬೇಟೆಗೆ ಹೋಗದೆ ನೀರಾಟಕ್ಕೆ ಹೋಗುತ್ತಾನೆ. ಮರುದಿನ ಚೆಂಡಾಟವಾಡಲು ಮನಸ್ಸು ಮಾಡಿದಾಗ ಅವನ ಗೆಳೆಯರು ರಾಮನ ತಾಯಿ ಹರಿಯಲ ದೇವಿಯ ಬಳಿಯಿದ್ದ ಮುಮ್ಮಡಿ ಸಿಂಗ ಭೂಪಾಲನ ಮುತ್ತಿನ ಚೆಂಡನ್ನು ತರಲು ಒತ್ತಾಯಿಸುತ್ತಾರೆ. ಗೆಳೆಯರನ್ನು ನಿರಾಶೆಗೊಳಿಸಲು ಇಚ್ಛಿಸದ ರಾಮ ನೇರ ತಾಯಿಯ ಬಳಿಗೆ ಹೋಗಿ ಚೆಂಡಿಗಾಗಿ ಬೇಡುತ್ತಾನೆ. ಆದರೆ ಹರಿಯಲದೇವಿ "ಚೆಂಡಾಟ ತುರುಗಾಹಿಗಳಿಗೆ ಮಾತ್ರ ಒಪ್ಪುವುದಲ್ಲದೆ ನಿನ್ನಂತಹ ಅರಸು ಮಕ್ಕಳಿಗಲ್ಲ. ಅಲ್ಲದೆ ನಿನ್ನನ್ನು ನೋಡಿದ ಹೆಣ್ಣುಗಳು ನಿನಗೆ ಮರುಳಾಗುತ್ತಾರೆ "ಈ ಆಟ ನಿನಗೆ ಬೇಡ' ಎಂದು ಎಷ್ಟು ಬಗೆಯಲ್ಲಿ ತಿಳಿಸಿ ಹೇಳಿದರೂ ಒಪ್ಪದ ರಾಮ ಕಡೆಗೆ "ನೀನನಗೊಲಿದು ತಂದಿತ್ತ ಪೆಣ್ಣಳಲ್ಲದೆ ಅನ್ಯ ಕಾಂತಾಜನಕೆ ಮನದೊಳಳುಪಿದೊಡೆ ನಿನಗೆ ರಾಯಗಾನು ಪುಟ್ಟದುದಿಲ್ಲಮ್ಮೆ"- ಎಂದು ಮಾತು ಕೊಟ್ಟು ಮನವೊಲಿಸಿ ಚೆಂಡನ್ನು ಪಡೆಯುತ್ತಾನೆ.

ವಿಧಿ ಲೀಲೆಯಂತೆ ರತ್ನಾಜಿಯ ಅರಮನೆಯ ಮುಂದಿನ ಬಯಲೇ ರಾಮ ಮತ್ತು ಗೆಳೆಯರಿಗೆ ಆಟದ ಮೈದಾನವಾಗುತ್ತದೆ.

ರಾಜಕುಮಾರರ ಚೆಂಡಾಟದ ಸಂಭ್ರಮವನ್ನು ವೀಕ್ಷಿಸಲು ಊರಮಂದಿಯೆಲ್ಲ ಅಲ್ಲಿ ಸೇರುತ್ತಾರೆ. ಆಟದ ಜೊತೆಗೆ ರಾಮನ ರೂಪವೂ ನೋಡಿದವರ ಕಣ್ಮನಗಳನ್ನು ತಣಿಸುತ್ತವೆ, ನೋಡಿದಷ್ಟೂ ನೋಡಬೇಕೆನ್ನುವ ತುಡಿತ ಹೆಚ್ಚಾಗುತ್ತದೆ. ಸುಗಮವಾಗಿ ಸಾಗುತ್ತಿದ್ದ ಚೆಂಡಾಟ ಅನಿರೀಕ್ಷಿತವಾಗಿ, ಆದರೆ ಸಂಗಿಯ ಕುಟಿಲ ದೇವತೆಗಳ ಮಾಯೆಯಿಂದ ಚೆಂಡು ಹಾರಿ ರತ್ನಾಜಿಯ ಅರಮನೆಯ ಅಂಗಳದಲ್ಲಿ ಹೋಗಿ ಬೀಳುತ್ತದೆ. ರೊಟ್ಟಿ ಜಾರಿ ತುಪ್ಪದಲ್ಲಿ ಬಿದ್ದಂತೆ, ರತ್ನಾಜಿ ಬಯಸಿದಂತೆ ಆ ಚೆಂಡು ಅವಳಲ್ಲಿಗೇ ಹೋಗುತ್ತದೆ. ಮೊದಲೇ ಕಾಮೋತ್ಕಟಳೂ, ಕಾಮಾತುರಳೂ ಆಗಿದ್ದ ರತ್ನಾಜಿ ತನ್ನ ನಿರೀಕ್ಷೆಯಂತೆ ಚೆಂಡು ಬೀಳಲು, ಅದನ್ನೇ ರಾಮನೆಂಬಂತೆ ಎದೆಗಪ್ಪಿಕೊಂಡು ಭಾವಪರವಶಳಾಗುತ್ತಾಳೆ. ಈ ಅನಾಹುತದಿಂದ ಮತ್ತು ತಾಯಿ ಹೇಳಿದ ಮಾತಿನ ನೆನಪಿನಿಂದ ಗಡಗಡ ನಡುಗಿ, ತನ್ನ ಆಪ್ತ ಗೆಳೆಯ ಕಾಟಣ್ಣನನ್ನು ಚಿಕ್ಕಮ್ಮನ ಬಳಿಗೆ ಕಳಿಸುತ್ತಾನೆ. ಆದರೆ ರತ್ನಾಜಿ ಕಾಟಣ್ಣನಿಗೆ ಚೆಂಡು ನೀಡಲು ನಿರಾಕರಿಸುತ್ತಾಳೆ. ಬದಲಾಗಿ ಅತಿಯಾದ ವಾತ್ಸಲ್ಯ ತೋರಿಸುತ್ತಾ, ತನ್ನ ಮಗ ರಾಮನನ್ನು ನೋಡಿ ಬಹಳ ದಿನಗಳಾದ್ದರಿಂದ ಅವನೇ ಬಂದು ಚೆಂಡನ್ನು ಕೊಂಡೊಯ್ಯಲಿ ಎನ್ನುತ್ತಾಳೆ. ವಿಧಿಯಿಲ್ಲದೆ, ಅಸಹಾಯಕನಾಗಿ ಕಾಟಣ್ಣ ಬರಿಗೈಲಿ ಹಿಂತಿರುಗುತ್ತಾನೆ.

ರಾಮನಿಗೆ ಚಿಕ್ಕಮ್ಮನಲ್ಲಿಗೆ ಹೋಗುವುದು ಅನಿವಾರ್ಯ ವಾಗುತ್ತದೆ. ಚಿಕ್ಕಮ್ಮನ ನಡತೆ, ಶೀಲಗಳ ಬಗ್ಗೆ ಏನೊಂದೂ ತಿಳಿಯದಿದ್ದರೂ ಅವನ ಮನಸ್ಸಿನಲ್ಲಿ ಅವ್ಯಕ್ತ ಭೀತಿ ಸುಳಿಯುತ್ತದೆ. ಯಾವ ಅನಿಷ್ಟವನ್ನು ತಾಯಿ ನಿರೀಕ್ಷಿಸಿದ್ದಳೋ,' ಪರನಾರಿ ಸೋದರ' ಎಂಬ ಪೆಂಡೆಯವನ್ನೂ ಕಾಲಿಗೆ ತೊಡಿಸಿರುತ್ತಾಳೆ. ಆದರೂ ಅವನಿಗೆ ಒಳಗೊಳಗೇ ಭಯ, ಸಂಶಯ. ಚಿಕ್ಕಮ್ಮನ ಅರಮನೆ ಒಳಹೋಗುತ್ತಿದ್ದಂತೆ ತಾಯಿಯೆಂಬ ಗೌರವ ಭಾವದಿಂದ ನಮಸ್ಕರಿಸುತ್ತಾನೆ. ಆದರೆ ರತ್ನಾಜಿಯ ಸ್ವಾಗತ, ಸತ್ಕಾರಗಳ ರೀತಿಯಲ್ಲಿ ಮಾತ್ರ ಅವಳ ಕುಟಿಲತನ ಎದ್ದು ಕಾಣುತ್ತಿತ್ತು. ತಾಯಿ ಮಗನಿಗೆ ನೀಡುವ ಸತ್ಕಾರದ ಪರಿಯಲ್ಲವಾಗಿತ್ತು. ಅಷ್ಟಕ್ಕೇ ನಿಲ್ಲದೆ ಇನ್ನೂ ಮುಂದುವರೆದು ತನ್ನನ್ನು ಸ್ವೀಕರಿಸುವಂತೆ ಕೇಳಿಕೊಳ್ಳುತ್ತಾಳೆ; ತನ್ನ ಅಳಲನ್ನು ತೋಡಿಕೊಳ್ಳುತ್ತಾಳೆ. ತಾನು ಬಯಸಿ

ದೊರೆಯನ್ನು ಮದುವೆಯಾದದ್ದಲ್ಲ. ಅನ್ಯಾಯವಾಗಿ ಹೆಂಡತಿಯಾಗುವತ್ತ ದೂಡಲಾಯಿತು. ನಾನೆಂದಿಗೂ ಅವನ ಹೆಂಡತಿಯಲ್ಲ. ನಿನ್ನನ್ನು ಬಯಸಿದವಳಿಗೆ ನಿನ್ನ ತಂದೆ ತನಗೆಂದು ಸೆಳೆದುಕೊಂಡನು. ಬಲವಂತದಿಂದ ಅರಮನೆಯನ್ನು ಹೊಗಿಸಿದರು.' ಎಂದು ಎಷ್ಟೋ ಪರಿಯಲ್ಲಿ ತಾನು ಅವನಿಗೆ ಚಿಕ್ಕಮ್ಮನೆಂಬ ಸಂಬಂಧವನ್ನು ಅಲ್ಲಗೆಳೆಯುತ್ತ, ವಿಕೃತ ಕಾಮಿಯಂತೆ ಅವನ ಮೇಲೆ ಹಾಯ್ದು ಬೀಳುತ್ತಾಳೆ.

ರತ್ನಾಜಿ ಕಾಮ ಕಲೆಗಳಲ್ಲಿ ಪ್ರಬುದ್ಧಳು. ಮೊದಲೇ ಅವಳು ರಾಮನ ನುಡಿಗೆ, ಲಾವಣ್ಯಕ್ಕೆ, ತೆಕ್ಕಗೆ, ಚುಂಬನಕ್ಕೆ ಹಪಹಪಿಸುತ್ತಿದ್ದವಳು ಅವಕಾಶ ದೊರೆತಿರುವಾಗ ಅವನನ್ನು ಕೂಡದಿದ್ದಲ್ಲಿ ತಾನು ಜೀವಂತವಿರಲಾರೆ ಎಂದು ನಂಬಿದವಳು. ಇಂದ್ರಿಯಗಳೆಲ್ಲವೂ ರಾಮನೆಡೆಗೆ ತುಡಿಯುತ್ತಿರುವಾಗ, ಕೈಗೆ ಸಿಕ್ಕವನನ್ನು ಹೇಗೆ ತಾನೇ ಬಿಟ್ಟಾಳು ! ತನ್ನ ಅಂತರಂಗದ ತುಡಿತವನ್ನು ಸಖಿಯೊಡನೆ ತೋಡಿಕೊಂಡಾಗ, ರಾಮನ ಮೇಲಿದ್ದ ತನ್ನ ಪ್ರೀತಿಯ ತೀವ್ರತೆಯನ್ನು ಹೇಳಿಕೊಂಡಾಗ, ವರಸೆಯಲ್ಲಿ ಮಗನಾಗಿರುವವನನ್ನು ಪ್ರೀತಿಸುವುದು, ಅವನನ್ನು ಕಾಮಿಸುವುದು ತಪ್ಪೆಂದು ಬುದ್ಧಿ ಹೇಳಿ ಆಗಬಹುದಾದ ಅನಾಹುತವನ್ನು ತಪ್ಪಿಸಬಹುದಾಗಿದ್ದ ಸಖಿ, ಸಂಗಿ ಮತ್ತಷ್ಟು ಅವಳನ್ನು ಪ್ರಚೋದಿಸುತ್ತಾಳೆ. ಒತ್ತಾಸೆ ನೀಡಿ ಸಮರ್ಥಿಸುತ್ತಾಳೆ. ಇನ್ನೂ ಒಂದು ಹೆಜ್ಜೆ ಮುಂದುವರೆದು ಕಾವನ ಮಸೆದ ಖಡ್ಗದಂತೆ ಹೊಳೆಯುತ್ತಿರುವ ಲಾವಣ್ಯದಿಂದ ಕೂಡಿದ ಜವ್ವನದ ಕೋವಿದರನ್ನು ಕಂಡು ಕೂಡದ ಅಬಲೆಯರು ಜೀವಿಸುವರೇ ?' ಎಂದು ಹೇಳಿ ಅವಳು ಬಯಸಿದ್ದು ನ್ಯಾಯ ಸಮ್ಮತವೆಂದು ಪುರಸ್ಕರಿಸುತ್ತಾಳೆ. 'ನಿನ್ನಂತಹ ಲಾವಣ್ಯವತಿ ಅಂತಹವನನ್ನು ಬಯಸಿದ್ದರಲ್ಲಿ ಯಾವ ತಪ್ಪೂ ಇಲ್ಲ. ಸವಿಯುಳ್ಳ ಸುಗುಣನನ್ನೇ ಬಯಸಿದ್ದೀಯೆ. ಹೇಗಾದರೂ ನಿನಗೆ ತಂದು ಕೊಡುವೆನೆಂದು 'ಭಾಷೆ ನೀಡಿದವಳು, ಹೀಗಿರುವಾಗ ಅವಳ ಕಪಿ ಮುಷ್ಟಿಯಿಂದ, ಸಂಬಂಧ ಬಂಧನದಿಂದ ತಪ್ಪಿಸಿಕೊಳ್ಳುವುದು ಸಾಧ್ಯವೇ ಇರಲಿಲ್ಲ. ಅವನ ಅಂಗ ಶೃಂಗಾರ, ಯವ್ವನಗಳು ರತ್ನಾಜಿಯ ಮನಸ್ಸಿನಲ್ಲಿ ಅಚ್ಚೊತ್ತಿ ಹೋಗಿ, ಅವನ ಸ್ಮರಣೆಯೇ ಊಟವಾಗಿ, ಅವನ ಪ್ರಶಂಸೆಯೇ ಉಸಿರಾಗಿ ಪರಿಣಮಿಸುತ್ತದೆ. ಕುಳಿತಲ್ಲಿ ನಿಂತಲ್ಲಿ, ನಡೆವಲ್ಲಿ, ನುಡಿವಲ್ಲಿ, ಕನಸಲ್ಲಿ ರಾಮ ಬಿಂಬ ಅವಳನ್ನು ಬೇಟೆಯಾಡುತ್ತಿರುತ್ತವೆ. ಈಗವನು

ಸಿಕ್ಕಾಗ ಹೆಣ್ಣಾಗಿಯೂ ನಾಚಿಕೆಯಿಲ್ಲದೆ 'ನೆಲೆಮೊಲೆಯೊಳು ರತ್ನಾಹಾರದಂತೆ ಅಗಲದೆ ನೆಲಸಿರು; ಜಘನದೊಳು ತೊಲಗದೆ ಕಾಂಚೀ ದಾಮದಂತಿರು' ಎಂದು ಆಹ್ವಾನಿಸುತ್ತಾಳೆ. ಆದರೆ ಅವಳ ಯಾವ ಒತ್ತಾಯಗಳಿಗೂ ಆಮಿಷಗಳಿಗೂ ಒಲಿಯದೆ ಶಿಸ್ತು, ಶುಚಿಗಳ ಪ್ರತೀಕದಂತಿದ್ದ ರಾಮ ಒಂದಿಷ್ಟು ವಿಚಲಿತನಾಗದೆ, ಅವಳು ಮಾಡುತ್ತಿರುವುದು ಪಾಪ ಕಾರ್ಯವೆಂದೂ, ತನಗವಳು ತಾಯಿ ಸಮಾನವೆಂದು ಹೇಳಿ, ಪ್ರಾಣಿಗಳಲ್ಲಿ ಮಾತ್ರ ಗಮನ ನೀತಿ ಇರುವುದನ್ನು ಉದಾಹರಿಸಿ ತನ್ನ ನಡತೆಯನ್ನು ಸಮರ್ಥಿಸಿ ಕೊಳ್ಳಲು ಹೊರಡುವ ರತ್ನಾಜಿಯ ಕಾಮದ ವಿಕೃತಿಯು ಅತಿರೇಕದ ಹಂತ ತಲುಪಿರುವುದನ್ನು ಸ್ಪಷ್ಟಗೊಳಿಸುತ್ತದೆ. ಅಲ್ಲದೆ ತಾನೇನೂ ರಾಮನನ್ನು ಹೆತ್ತ ತಾಯಿ ಅಲ್ಲವಲ್ಲ! ಎಂಬುದು' ಅವಳ ತರ್ಕವಾಗುತ್ತದೆ.

ಅವಳು ಮಾಡುವ ವಿಶ್ವ ಪ್ರಯತ್ನಗಳೆಲ್ಲವೂ ಸೋತು ನೆಲ ಕಚ್ಚಿದಾಗ, ಸಾಮ, ದಾನ, ಭೇದಗಳೊಂದೂ ಫಲಿಸದಾದಾಗ ಸೇಡಿನ ಹಾವು ಹೆಡೆ ಬಿಚ್ಚುತ್ತದೆ. ಅವಳಲ್ಲಿ ಸ್ಫೋಟಿಸಿದ ಕ್ರೋಧದ ಜ್ವಾಲಾಮುಖಿ ರಾಮನನ್ನು ಸುಟ್ಟು ಭಸ್ಮ ಮಾಡಲು ಹೊರಡುತ್ತದೆ.ಅವನ ಬಗೆಗೆ ತನ್ನಲ್ಲಿ ಎಷ್ಟು ಗಾಢ, ತೀವ್ರ ಪ್ರೀತಿಯಿತ್ತೋ ಅದೆಲ್ಲವೂ ಈಗ, ಪ್ರೀತಿಯ ತೀವ್ರತೆಗಿಂತಲೂ ಹೆಚ್ಚಾಗಿ ದ್ವೇಷವಾಗಿ ಪರಿಣಮಿಸುತ್ತದೆ.ತನಗೆ ದಕ್ಕದ ರಾಮ ಜೀವಂತವಾಗಿ ಇರಕೂಡದು ; ಸೇಡಿನ ಬೆಂಕಿಯಲ್ಲಿ ಸುಟ್ಟು ಬೂದಿಯಾಗದ ಹೊರತು, ಅವನ ವಿನಾಶದ ಸುದ್ದಿ ತನ್ನ ಕಿವಿ ಮುಟ್ಟದ ಹೊರತು ಅವಳಿಗೆ ಸಮಾಧಾನವಾಗುವುದಿಲ್ಲ. ಆದರೆ ಶಿಕ್ಷೆ ತಾನೇ ಸ್ವತಃ ಕೊಡದೆ ತನ್ನನ್ನು ಆರಾಧಿಸುವ, ಅತಿಯಾಗಿ ಪ್ರೀತಿಸುವ ಪ್ರೇಮಾಂಧನೂ, ಕಾಮಾಂಧನೂ ಆಗಿರುವ ದೊರೆಯೇ ಅವಳಿಗೆ ರಾಮನ ಮೇಲಿನ ಪ್ರಹಾರಕ್ಕೆ ಪರಮಾಯುಧವಾಗಿ ಒದಗುತ್ತಾನೆ.

ಬೇಟೆಯಾಡಿ ದಣಿವಿನಿಂದ ಬಂದ ಅರಸ ತನ್ನ ಮೋಹದ ಮಡದಿಯಿಂದ ಪ್ರೀತಿ, ಸತ್ಕಾರಗಳ ಸವಿಯನ್ನು ತಂಪನ್ನು ನಿರೀಕ್ಷಿಸಿರುತ್ತಾನೆ. ಆದರೆ ಅವನ ನಿರೀಕ್ಷೆಗೆ ವಿರುದ್ಧವಾಗಿ, ರತ್ನಾಜಿ ಯಾರಿಂದಲೋ ಲೈಂಗಿಕ ಅತ್ಯಾಚಾರಕ್ಕೆ ಒಳಗಾಗಿ ಅಸ್ತವ್ಯಸ್ತವಾಗಿರುವ ರೀತಿಯಲ್ಲಿ ಒಂದು ದೃಶ್ಯ ನಿರ್ಮಾಣ ಮಾಡುತ್ತಾಳೆ. ಅವಳ ನಟನೆಯ ಜಾಣ್ಮೆ ಅವಳಿದ್ದ ಸ್ಥಿತಿಯಿಂದ ಗಾಭರಿಗೊಂಡ ದೊರೆ ಅಕ್ಕರೆಯಿಂದ ಮಾತಾನಾಡಿಸಿ ಅವಳ ಈ ಸ್ಥಿತಿಗೆ

ಕಾರಣ ಯಾರೆಂದು ವಿಚಾರಿಸುತ್ತಾನೆ. ಭಿತ್ತಿಯಿಲ್ಲದೆ ಚಿತ್ರ ಬರೆಯುವಂತೆ, ಸುಳ್ಳನ್ನೇ ಹುರಿಗೊಳಿಸಿ, ತನ್ನೆಲ್ಲ ಜಾಣ್ಮೆಯನ್ನು ಉಪಯೋಗಿಸಿ ದೊರೆ ಮಗನೇ ಆದವನಿಂದ ಇಂತಹ ಅತ್ಯಾಚಾರವಾಯಿತೆಂದು ಹೇಳಿ ನಂಬಿಸುತ್ತಾಳೆ. ಅವನ ದಾಸ್ಯ, ದೈನ್ಯಗಳಿಂದ, ಅವನನ್ನು ತನ್ನ ಬುಟ್ಟಿಗೆ ಸರಾಗವಾಗಿ ಹಾಕಿಕೊಳ್ಳ ಬಹುದೆಂದು ಮನವರಿಕೆ ಯಾದದ್ದೇ, ಕಪಟ ಪ್ರೇಮವನ್ನು ತೋರುತ್ತ, ಕಣ್ಣೀರು ಹರಿಸುತ್ತ ಬಗೆ ಬಗೆಯ ಬಣ್ಣದ ಚಾಡಿ ಮಾತುಗಳಿಂದ, ನೋವಿನ ನಟನೆಯಿಂದ ಅವನ ಮರ್ಮೋದ್ಘಾಟನೆ ಮಾಡಿ, ಬಲೆ ಬೀಸಿ ವಿವೇಕವನ್ನು ಕುರುಡುಗೊಳಿಸಿ ತನ್ನ ಬಲೆಯಲ್ಲಿ ಕೆಡವಿಕೊಳ್ಳುತ್ತಾಳೆ. ಸಕಲೇಂದ್ರಿಯಗಳನ್ನೂ ಏಕ ಕಾಲದಲ್ಲಿ ತಣಿಸಿ, ಪರಮ ಸುಖ ನೀಡಬಲ್ಲ ಸಮರ್ಥ ಹೆಣ್ಣಿನ ಮಾತುಗಳಾಗಿ ಮರುಳಾಗಿ, ಅವಳನ್ನಪ್ಪಿಕೊಂಡು, ಲಲ್ಲೆ ಮಾಡಿ, ಕಂಬನಿಯೊರಸಿ ಹಿಂದು ಮುಂದುಗಳನ್ನು ಆಲೋಚಿಸದೆ, ಸತ್ಯವೇನೆಂದು ತಿಳಿಯುವ ಪ್ರಯತ್ನ ಮಾಡದೆ 'ಕೋಪವ ಬಿಡು ಕೋಮಲಾಂಗಿ, ಕೊಲಿಸುವೆ ನಾನಾ ಪಾತಕನ ಬೇಗದೊಳು' ಎಂದು ಕೂಡಲೇ ಮಾತುಕೊಟ್ಟು ಬಿಡುತ್ತಾನೆ. ಅಲ್ಲಿಂದಲೇ ಕೋಪಾಟೋಪ ದೊಂದಿಗೆ ಮೊಗಸಾಲೆಯತ್ತ ಹೊರಟು ಮಂತ್ರಿಯನ್ನು ಕರೆಸಿ' ರಾಮನಾಥನ' ಕೊಲೆಯ ಆದೇಶ ನೀಡುತ್ತಾನೆ. ಅಷ್ಟೇ ಆದರೆ ಸಾಲದು, ಕೊಲೆಯ ಖಚಿತತೆಗೆ ಅವನ ರುಂಡವನ್ನು ತಂದು ತೋರಿಸಬೇಕೆನ್ನುತ್ತಾನೆ. ಆದರೆ ಅರಸನಿಗೆ ವಿವೇಕವಿಲ್ಲದಿದ್ದರೂ ಮಂತ್ರಿ ವಿವೇಕವಂತನಾದ್ದರಿಂದ ರಾಮನನ್ನು ಅಜ್ಞಾತವಾಸದಲ್ಲಿರಿಸಿ, ಸಮಯ ಬಂದಾಗ ಸತ್ಯವನ್ನು ಹೊರಗೆಡಹಿ ರತ್ನಾಜಿಗೆ ಶಿಕ್ಷೆಯಾಗುವಂತೆ ಮಾಡುತ್ತಾನೆ.

ಹೀಗೆ ಪ್ರೀತಿ ತನ್ನೊಂದಿಗೆ ದ್ವೇಷ, ಸೇಡು, ಮುಂತಾದವುಗಳನ್ನೂ ಹೊತ್ತುಕೊಂಡೇ ಮುಂದುವರೆಯುತ್ತದೆ. ಸಮಯ ಸಂದರ್ಭಕ್ಕೆ ತಕ್ಕಂತೆ ಅದು ತನ್ನಲ್ಲಿನ ಮಾರ್ದವತೆ, ತ್ಯಾಗ ನಿಸ್ವಾರ್ಥತೆಗಳನ್ನು ಬಲಿಗಿಕ್ಕಿ ಈ ರೀತಿ ವಿಕೃತ, ದುರಂತ ಪರಿಣಾಮಗಳ ಕಡೆಗೆ ಮುಖ ಮಾಡುತ್ತದೆ. ಪ್ರೀತಿಮೂಲದಿಂದ ಹೊರಡುವ ದ್ರೋಹದ ರೀತಿಗಳಿಗೆ ಅನೇಕ ಐತಿಹಾಸಿಕ ಘಟನೇಗಳೇ ಸಾಕ್ಷಿಯಾಗಿ ನಿಲ್ಲುತ್ತವೆ.

★ ★ ★

ನೆಲೆ - ೧೩

# ಇಂತು ತನ್ನಂ ಬಿಡಲ್ ಮಾಡಿದಪರಾಧ ಮುಂಟೇ ?

ಪ್ರೀತಿಯ ಬಗ್ಗೆ ಯಾವಾಗಲೂ ಉದಾತ್ತವಾಗಿ ಮಾತನಾಡುತ್ತೇವೆ. ಜಗತ್ತೆಲ್ಲವನ್ನೂ ಒಂದಾಗಿ ಬೆಸೆಯಬಲ್ಲ ಮಾಂತ್ರಿಕ ಶಕ್ತಿ, ಮೌಲ್ಯವಿದೆಯೆಂದು ನಂಬುತ್ತೇವೆ. ಆದರೆ ಪ್ರೀತಿಸುವ ವ್ಯಕ್ತಿಗಳಿಗೆ ತಮ್ಮ ಪ್ರೀತಿಯಿಂದ ಸಿಗುವ ಸುಖಕ್ಕಿಂತ ನೋವೇ ಜಾಸ್ತಿ. ಪ್ರೀತಿಯ ಆಳದಲ್ಲಿ ಅನೇಕ ನಿರ್ಬಂಧಗಳು ಕ್ಷುಲ್ಲಕವಾದ ಭಾವನೆಗಳು ಅಡಗಿರುವ ಸಾಧ್ಯತೆಯುಂಟು.ಮೇಲುನೋಟಕ್ಕೆ ಕಾಣಿಸುವಷ್ಟು ಸರಳ ಅಲ್ಲ ಪ್ರೀತಿ. ಪ್ರೀತಿಯ ಪ್ರಪಂಚದಲ್ಲಿ ಎಲ್ಲ ವೈರುಧ್ಯಗಳೂ, ದ್ವಂದಗಳೂ ಕರಗಿ ಎಲ್ಲವೂ ಒಂದಾಗುತ್ತದೆ ; ಲಾಭ-ನಷ್ಟಗಳು ಸಮರಸಗೊಳ್ಳುತ್ತವೆ ಎನ್ನುವುದು ಎಷ್ಟು ಸತ್ಯವೋ ಪ್ರೀತಿಯಲ್ಲಿ ಬಂಧನ, ಬಿಡುಗಡೆ. ಸ್ನೇಹ, ಹಗೆ, ಸ್ವಾರ್ಥ-ತ್ಯಾಗ ಇತ್ಯಾದಿಯಾಗಿ ದ್ವಂದ್ವಗಳಿರುವುದೂ ಅಷ್ಟೇ ಸತ್ಯ.

ಗಾಢವಾಗಿ, ದೀರ್ಘಕಾಲದವರೆಗೂ ಪ್ರೀತಿಸುತ್ತಲೇ ಬಂದ ವ್ಯಕ್ತಿಗಳ, ಗಂಡ ಹೆಂಡಿರ ನಡುವೆ, ಎಂಥ ಅಡಚಣೆಗಳು, ಆರೋಪಗಳು, ಅಪವಾದಗಳು ಬಂದರೂ ಪ್ರೀತಿ ಕಲುಷಿತವಾಗಬಾರದು.ಅನುಮಾನಕ್ಕೆ ಆಸ್ಪದ ಕೊಡಬಾರದು.ಪ್ರೀತಿಸುವವರಲ್ಲಿ ಪರಸ್ಪರ ವಿಶ್ವಾಸ ನಂಬಿಕೆಗಳು ಇಲ್ಲದಿದ್ದಲ್ಲಿ ಆ ಪ್ರೀತಿಯ ಪ್ರಾಮಾಣಿಕತೆಗೆ, ಗಾಢತೆಗೆ ಅರ್ಥವೇ ಇಲ್ಲದಂತಾಗುತ್ತದೆ. ಪ್ರೀತಿಯ ನಿಷ್ಠೆ ಒಂದು ದಿಕ್ಕಿನಲ್ಲಿ ಇದ್ದಾಗ ಸಮಸ್ಯೆ ಅಷ್ಟು ದೊಡ್ಡದೆನಿಸುವುದಿಲ್ಲ. ಆದರೆ ವ್ಯಕ್ತಿಯೊಬ್ಬನ ಪ್ರೀತಿ ಹಲವು ದಿಕ್ಕುಗಳಲ್ಲಿ ಹಲವು ವ್ಯಕ್ತಿಗಳಲ್ಲಿ ಹಂಚಿಕೊಂಡಿರುವಾಗ, ಒಂದು ಕಡೆಯ ಪ್ರೀತಿಯನ್ನು ಉಳಿಸಹೋಗಿ ಅಥವಾ ನಿಷ್ಠವಾಗಲು ಪ್ರಯತ್ನಿಸಹೋಗಿ ಮತ್ತೊಂದಕ್ಕೆ ಹಾನಿ. ನೋವು ತಪ್ಪಿಸಲು ಸಾಧ್ಯವಾಗುವುದಿಲ್ಲ.

ರಾಮಾಯಣದಲ್ಲಿ ಬರುವ ರಾಮ-ಸೀತೆಯ ಪ್ರೀತಿಯ ಅನನ್ಯತೆ ಪರಸ್ಪರರ ತ್ಯಾಗಗಳ ಬಗ್ಗೆ ಮಾತಾಡುವಾಗ, ಕೈಹಿಡಿದ ಸೀತೆಯನ್ನು, ತನ್ನ ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸಿದವಳನ್ನು ಹೊಸದಾಗಿ ಮದುವೆಯಾಗಿದ್ದೂ,

ಅರಮನೆಯಲ್ಲಿ ಸುಖ ಜೀವನವನ್ನು ನಡೆಸುವ ಸಾಧ್ಯತೆಯಿದ್ದರೂ ಗಂಡನ ಜೊತೆಯಲ್ಲಿ ವನವಾಸದ ಬವಣೆಗಳನ್ನು ಎದುರಿಸಲು ಸಿದ್ಧಳಾಗಿ ಹೊರಟವಳನ್ನು ಮುಂದೆ ಶ್ರೀರಾಮ ಪರಿತ್ಯಾಗ ಮಾಡುವುದು ಅನೇಕ ಸವಾಲುಗಳನ್ನು ಹುಟ್ಟುಹಾಕುತ್ತದೆ.

ನಮ್ಮ ಕನ್ನಡ ಕವಿಗಳು ರಾಮಾಯಣ, ಮಹಾಭಾರತ, ಮಹಾಕಾವ್ಯಗಳನ್ನು ತಮ್ಮ ದೃಷ್ಟಿ ಧೋರಣೆಗಳಿಗೆ ತಕ್ಕಂತೆ ರೂಪಾಂತರಿಸಿಕೊಂಡರೂ ಮೂಲ ಕಥಾ ಪ್ರಸಂಗಗಳನ್ನು ತಿರುಚುವ ಸಾಹಸಕ್ಕೆ ಕೈ ಹಾಕಲಿಲ್ಲ. ಕನ್ನಡದಲ್ಲಿ ನಾದಲೋಲನೆಂದು ಹೊಗಳಿಸಿಕೊಂಡ ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಸಾಂದರ್ಭಿಕವಾಗಿ ಬರುವ 'ಸೀತಾಪರಿತ್ಯಾಗ'ದ ಭಾಗದಲ್ಲಿ ರಾಮ-ಸೀತೆಯ ನಡುವಿನ ಪ್ರೀತಿಯ ಸ್ವರೂಪ ಚಿಂತನೆಗೆ ಅವಕಾಶವೇರ್ಪಟ್ಟಿದೆ.

ರಾವಣನಿಂದ ಸೀತಾಪಹರಣವಾದ ಮೇಲೆ, ರಾಮ ಅವಳಿಗಾಗಿ ಹಂಬಲಿಸಿ, ಶೋಕಾರ್ತನಾಗಿ ಕಾಡು ಮೇಡನ್ನದೆ ಅಲೆದಲೆದು ಶೋಧ ನಡೆಸಿ ಕಡೆಗೆ ರಾವಣನ ಮೇಲೆ ಭಯಂಕರ ಯುದ್ಧ ಮಾಡಿ ಗೆದ್ದು ಮಡದಿ ಸೀತೆಯನ್ನು ರಾವಣ ಸೆರೆಯಿಂದ ಬಿಡಿಸಿಕೊಂಡು ಬಂದು ಅಯೋಧ್ಯೆಯಲ್ಲಿ ಪುನಃ ಪ್ರತಿಷ್ಠಾಪನೆಯಾಗಿ ರಾಜ್ಯಭಾರ ಮಾಡುವ ಸಂದರ್ಭದಲ್ಲಿ, ಸೀತೆಯ ಮೇಲೆ ತನಗಿದ್ದ ಪ್ರೀತಿಯ ಪರೀಕ್ಷೆಯ ಸಂದರ್ಭ ಒದಗುತ್ತದೆ. ಮಕ್ಕಳಿಲ್ಲವೆಂದು ಹಲುಬಿ ಹಂಬಲಿಸಿ, ಕಡೆಗೆ ಮಗುವಾಗುವ ಸೂಚನೆಗಳು ಕಾಣಿಸಿಕೊಂಡು ಎಲ್ಲವೂ ಸುಸೂತ್ರವಾಗಿ ಸಾಗುತ್ತಿದೆಯೆಂಬ ಸಮಾಧಾನ ಮಾಡುತ್ತಿರುವಾಗಲೇ, ಸೀತೆಗೆ ಮತ್ತೊಂದು ಅಗ್ನಿಪರೀಕ್ಷೆ ಎದುರಾಗುತ್ತದೆ. ರಾವಣನ ಸೆರೆಯಲ್ಲಿ ಪರಿಶುದ್ಧಳಾಗಿಯೇ ಇದ್ದಳೆಂಬುದು ತನ್ನ ಮಟ್ಟಿಗೆ ಖಾತ್ರಿಯಾದರೆ ಸಾಲದು. ಪ್ರಜಾಕೋಟಿಯ ಮುಂದೆ ಅಗ್ನಿ ಪ್ರವೇಶದ ಮೂಲಕ ಪಾವಿತ್ರ್ಯತೆಯನ್ನು ಪ್ರಮಾಣೀಕರಿಸಿದ್ದು ಸಾಲದೆಂಬಂತೆ, ಕ್ಷುದ್ರ ಅಗಸನೊಬ್ಬನ ನಿಂದೆಯ ಮಾತುಗಳು, ರಾಮನ ಪ್ರೀತಿಯಲ್ಲಿ ಬಿರುಕುಗಳನ್ನು ಉಂಟುಮಾಡಿದ್ದು ಎಷ್ಟು ಸಮಂಜಸ ? ಕೈ ಹಿಡಿದ ಗಂಡ ರಾಮನನ್ನು ಅತಿಯಾಗಿ ಪ್ರೀತಿಸಿದ್ದರಿಂದ ಅವನಿಂದ ತಾನು ಅನುಭವಿಸಿದ

ಕಷ್ಟಗಳು, ಅವಮಾನಗಳು ಎಲ್ಲವನ್ನು ಸಹನೀಯವಾಗಿಸಿಕೊಂಡ ಸೀತೆಯನ್ನು, ಅವಳ ಪಾತಿವ್ರತ್ಯ ಪ್ರೀತಿಗಳನ್ನು ದೃಢವಾದ ನಂಬಿಕೆಯಿಂದ ಸಮರ್ಥಿಸಿಕೊಳ್ಳದೆ ಮತ್ತೆ ಅನುಮಾನದ ತೆಕ್ಕೆಗೆ ಬಿದ್ದು ತುಂಬು ಬಸುರಿಯನ್ನು ಕಾಡಿಗೆ ಅಟ್ಟುವುದು ಯಾವ ಪುರಷನಿಗೂ ಯೋಗ್ಯವಲ್ಲ. ಆದರೂ ತನ್ನ ತಮ್ಮಂದಿರನ್ನು ಕರೆ ಕಳುಹಿಸಿ, ತನ್ನ ನಿರ್ಧಾರಕ್ಕೆ ಕಾರಣಗಳನ್ನು ನೀಡಿ ಸಮರ್ಥಿಸಿಕೊಳ್ಳುವ ರೀತಿ ಹೀಗಿದೆ :- 'ಸೋದರರೇ ನನಗೆ ಬಂದ ಲೋಕಾಪವಾದ ಏನೆಂದು ನಿಮಗೆ ತಿಳಿದಲ್ಲಿ, ಜನರ ಮದ್ಯೆ ಕದ್ದ ಕಳ್ಳನಂತೆ ದೂಷಣೆಯನ್ನು ಸಹಿಸಿಕೊಂಡಿರಲು ಸಾಧ್ಯವಿಲ್ಲ.ನಿಂದೆಯನ್ನು ತಲೆಯ ಮೇಲೆ ಹೊತ್ತು ನನಗೆ ಬಾಳಲು ಸಾಧ್ಯವಿಲ್ಲ. ಪ್ರಯತ್ನಿಸಿದರೂ ದೂರವಾಗದ ಈ ಅಪವಾದಕ್ಕೆ ಹೆದರುತ್ತೇನೆ. ಅದಕ್ಕಾಗಿಯೇ ಸೀತಾ ಪರಿತ್ಯಾಗದ ನಿರ್ಧಾರವನ್ನು ಮಾಡಿದ್ದೇನೆ. ಇವಳು ಭೂ ಜಾತೆ. ಮಾನವ ಗರ್ಭದಲ್ಲಿ ಜನಿಸಿದವಳಲ್ಲ. ರೂಪ, ಗುಣ, ಶೀಲಸಂಪನ್ನೆ, ಮಂಗಳ ಸ್ವರೂಪಿಣಿ, ಪಾವನ ಚರಿತೆ- ಇದರಲ್ಲಿ ಅನುಮಾನವಿಲ್ಲ. ಆದರೆ ನಿಂದೆಗೆ ಒಳಗಾದ ಮೇಲೆ ಅವಳನ್ನು ತ್ಯಜಿಸಲೇ ಬೇಕು' ಎಂದು ಹೇಳುವುದು ಯಾವ ನ್ಯಾಯ. ಕೇವಲ ನಿಂದೆಯ ಭೀತಿ ಅಷ್ಟು ವರ್ಷಗಳ ಅವರಿಬ್ಬರ ಪ್ರೀತಿಯ ಬುನಾದಿಯನ್ನು ಅಲುಗಾಡಿಸುವುದೇ ? ಹಾಗಿದ್ದ ಮೇಲೆ ಅದೆಂತಹ ಪ್ರೀತಿ ? ವಂಶ ಮರ್ಯಾದೆ, ಕರ್ತವ್ಯ ಪಾಲನೆ, ಪ್ರಜಾ ಪ್ರೀತಿಗಳು ಹೆಂಡತಿಯ ಪ್ರೀತಿಯನ್ನು ಇಷ್ಟು ಸಡಿಲಗೊಳಿಸುವುದೇ ? ರಾಮನ ನಿರ್ಧಾರಕ್ಕೆ ಯಾವುದೇ ಬಲವಾದ ಸಮರ್ಥನೆಯಾಗಲೀ, ತರ್ಕವಾಗಲಿ ಇರುವುದಿಲ್ಲ. ರಾಮನ ತಮ್ಮಂದಿರಿಗೆ ಇರುವ ವಿವೇಕವಾಗಲೀ, ಸೀತೆಯ ಪರಿಶುದ್ಧತೆಯ ಬಗ್ಗೆ ಇರುವ ಅಪಾರ ನಂಬಿಕೆಯಾಗಲೀ ರಾಮನಿಗೆ ಇಲ್ಲದೆ ಹೋಗುವುದು ನಿಜವಾಗಿಯೂ ವಿಷಾದನೀಯ. ತಮ್ಮಂದಿರು ತಿಳಿದಂತೆ ಸೀತೆ ನಿರುಪದ್ರವಿ; ಹಸನಾದ ಹಸುವಿದ್ದಂತೆ. ಅಗ್ನಿಪರೀಕ್ಷೆಯ ಕಾಲದಲ್ಲಿ ಸಮಸ್ತ ದೇವಕೋಟಿ, ಮಾನವಕೋಟಿ, ರಾಕ್ಷಸರ ಸಮ್ಮುಖದಲ್ಲಿ ಸ್ವತಃ ದಶರಥನೇ ಪ್ರತ್ಯಕ್ಷನಾಗಿ ಸೊಸೆಯ ಪಾವಿತ್ರ್ಯತೆಯನ್ನು ಸಾರಿ ಹೇಳಿ ಸ್ವೀಕರಿಸೆಂದಿದ್ದಾನೆ. ಜೊತೆಗೆ ಸೀತೆಯ ಭಾವಶುದ್ಧಿಯನ್ನು ಸ್ವತಃ ಅರಿತವನಾಗಿದ್ದಾನೆ. ಹೀಗಿದ್ದರೂ ಅವಳನ್ನು ಕಾಡಿಗಟ್ಟುವುದು ಎಳ್ಳಷ್ಟೂ

ಸಮರ್ಥನೀಯವಾಗುವುದಿಲ್ಲ.

ರಾಮನನ್ನು ಎಷ್ಟೊಂದು ಉದಾತ್ತವಾಗಿ ಕಲ್ಪಿಸಿಕೊಂಡ ಮನಸ್ಸುಗಳಿಗೆ ತೀರ ಕಸಿವಿಸಿಯಾಗುವುದರಲ್ಲಿ ಆಶ್ಚರ್ಯವೇ ಇಲ್ಲ. ಯಾರ ಹಿತವಚನಕ್ಕೂ ಮಣಿಯದೆ, 'ಒಳ್ಳೆಯದೋ ಕೆಟ್ಟದೋ ಎಂದು ವಿಚಾರಿಸದೆ ನಾನು ನುಡಿದಂತೆ ಮಾಡು. ನಿನಗದು ಇಷ್ಟವಾಗದಿದ್ದಲ್ಲಿ ನನ್ನ ಕೊರಳ ಕತ್ತರಿಸು, ಜಾನಕಿಯನ್ನು ಗಂಗಾ ನದಿಯ ತೀರದಲ್ಲಿರುವ ಪಕ್ಕದ ಅರಣ್ಯವೊಂದರಲ್ಲಿ ಬಿಟ್ಟು ಬಾ' ಎಂದು ಆದೇಶಿಸುವುದು ತೀರಾ ನಿಷ್ಠುರವೆನಿಸುತ್ತದೆ. ವಿವೇಕವಿದ್ದೂ ಭ್ರಾತೃ ಪ್ರೇಮದ ಅತಿರೇಕದಲ್ಲಿ ಅನ್ಯಾಯವೆಂದು ತಿಳಿದೂ ಅಣ್ಣನ ಆದೇಶಕ್ಕೆ ಮಣಿಯುವ ಅಸಹಾಯಕತೆ ಲಕ್ಷ್ಮಣನದಾಗುತ್ತದೆ. ಮನಸ್ಸಿಲ್ಲದ ಮನಸ್ಸಿನಿಂದ, ಒಂದು ಪ್ರೀತಿಯನ್ನು ಉಳಿಸಿಕೊಳ್ಳುವ, ಪ್ರೀತಿಯನ್ನು ಗೌರವಿಸುವ ಪ್ರಯತ್ನದಲ್ಲಿ ಇನ್ನೊಂದು ಪ್ರೀತಿ (ಅತ್ತಿಗೆಯ ಪ್ರೀತಿ)ಯ ಕೊಲೆಯ ಕ್ರೌರ್ಯಕ್ಕೆ ಮುಂದಾಗುತ್ತಾನೆ. ಲಕ್ಷ್ಮಣನಿಗೆ, ಅಣ್ಣನ ಆಜ್ಞೆಯನ್ನು ಮೀರಿ ರೌರವ ನರಕಕ್ಕೆ ಹೋಗುವುದೇ? ತಾಯಿಯಂತಹ ಅತ್ತಿಗೆಯನ್ನು ಕೊಂದು ಮಹಾಪಾಪಕ್ಕೆ ಒಳಗಾಗುವುದೇ?- ಎಂಬ ಸಂದಿಗ್ಧತೆಯಲ್ಲಿ ಹೊಯ್ದಾಡುವಂತಾಗುತ್ತದೆ. ಆದರೂ ಅಣ್ಣನ ಪ್ರೀತಿ, ಅವನ ಆದರ್ಶಗಳ ರಕ್ಷಣೆಯ ಜವಾಬ್ದಾರಿ ಅತ್ತಿಗೆಯನ್ನು ಋಷ್ಯಾಶ್ರಮ ದರ್ಶನದ ಮಿಥ್ಯಾ ನೆಪದಲ್ಲಿ ಕಾಡಿಗೆ ಕರೆದೊಯ್ಯುವಂತೆ ಮಾಡುತ್ತದೆ. ಋಷ್ಯಾಶ್ರಮಗಳ ದರ್ಶನ, ಮುನಿ ಪತ್ನಿಯರಿಗಾಗಿ ಮಂಗಳ ದ್ರವ್ಯ. ಬಾಗಿನ ಆಭೂಷಣಗಳ ಉಡುಗೊರೆ ನೀಡುವ ಸಂಭ್ರಮದಲ್ಲಿ ಸಿದ್ಧಳಾದ ಸೀತೆಯನ್ನು ಕಂಡಾಗ ಅವನ ಅಂತರಂಗ ತುಮುಲಕ್ಕೆ ಎಣೆಯಿಲ್ಲವಾಗುತ್ತದೆ. 'ಕೋಮಲೆಯ ಕೊಲೆಗೆಲಸಕ್ಕೆ ಸಜ್ಜಾದ ಜೀವ ಸುಡಲಿ' ಎಂದು ತನ್ನನ್ನು ತಾನೇ ಧಿಕ್ಕರಿಸಿಕೊಳ್ಳುತ್ತಾನೆ. ಗಂಡನ ನಿರ್ದಯ ನಿರ್ಧಾರ, ಮೈದುನನ ಅಸಹಾಯಕತೆಯ ಅರಿವಿಲ್ಲದೆ ಮುಗ್ಧಳಂತೆ, ತನ್ನಾಸೆಯನ್ನು ನೆರವೇರಿಸಿದ ಗಂಡನ ಬಗ್ಗೆ ಪ್ರೀತಿ ತುಂಬಿ ಬಂದು ಕೃತಜ್ಞತಾ ಭಾವದಿಂದ ಗರಿ ಗೆದರಿ ನಿಂತ ಮನಸ್ಸಿಗೆ ಮುಂದಿನ ಆಘಾತದ ಕಲ್ಪನೆಯೇ ಇರುವುದಿಲ್ಲ. ಅವರೆ ತಾನು ಬರಬೇಕಾಗಿದ್ದ ಋಷ್ಯಾಶ್ರಮಗಳ, ಪುಣ್ಯ ತೀರ್ಥಗಳ ಪರಿಸರ

ಕಾಣದ ಕಣ್ಣಿಗೆ ಭಯಂಕರವಾಗಿ ಕಾಣಿಸುವ ಘೋರಾಟವಿ, ಗಹ್ವರಗಳು ಎದುರಾಗಲು ಭಯದಿಂದ ತತ್ತರಿಸಿ, ನಡುಗಿ ಇಂತಹ ಸ್ಥಿತಿಗೆ ಕಾರಣ ರಾಮನೆಂದರಿಯದೆ ಅವನದೇ ನಾಮವನ್ನು ಜಪಿಸುತ್ತಾ, ಮುಗ್ಧಳಂತೆ, ಲಕ್ಷ್ಮಣನನ್ನು 'ಎಲೆ ಸೌಮಿತ್ರಿ, ಇದು ಕಾಡು ಅಲೆದಾಟಕ್ಕೆ ಅಸಂಭವವಾಗಿದೆ.ಇಲ್ಲೆಲ್ಲಿಯೂ ಪುಣ್ಯಾಶ್ರಮಗಳಾಗಲೀ ನಾರುಮುಡಿಯುಟ್ಟ ಜಟಿಗಳಾಗಲೀ, ಮುನಿವಧುಗಳಾಗಲೀ ಕಾಣುತ್ತಿಲ್ಲ. ಹೋಮ ಧೂಮಗಳಿಂದ ಕೂಡಿದ ಆಶ್ರಮಗಳಲ್ಲಿ ಮಂಗಳ ಮಂತ್ರೋಚ್ಚಾರಣೆಗಳೆಲ್ಲಿ? ಈ ಪ್ರದೇಶವೆಲ್ಲಿ ? ಒಂದಕ್ಕೊಂದು ಸಂಬಂಧವೇ ಇಲ್ಲವಲ್ಲ' ಎಂದು ಆರ್ತಳಾಗಿ ಕೇಳಿದ ಪ್ರಶ್ನೆಗೆ ಲಕ್ಷ್ಮಣನಿಂದ ಏನು ತಾನೇ ಉತ್ತರವಿದ್ದೀತು ? ಮೌನವಾಗಿ ಕಂಬನಿ ಮಿಡಿದು , ಕೊರಳು ಬಿಗಿದು ಶೋಕಾತಿರೇಕದಿಂದ ತಾನು ಕೈಗೊಂಡಿರುವ ಕ್ರೂರ, ರಾಕ್ಷಸ ಕರ್ತವ್ಯವನ್ನು ಉಸಿರಲಾಗದೆ ಉಸಿರುತ್ತಾನೆ' ಆಕೆಯ ಮೇಲೆ ಬಂದೆರಗಿದ ಅಪವಾದವನ್ನು, ಅದರಿಂದಾಗಿ ತನ್ನಣ್ಣನಾದ ರಾಮನು ಅವಳಿಗೆ ವಿಧಿಸಿದ ಶಿಕ್ಷೆಯನ್ನು ತಿಳಿಸುತ್ತಾನೆ. "ನೀನು ಅಣ್ಣನಿಗೆ ಬೇಡವಾಗಿ, ನಿನ್ನನ್ನು ಕರೆದೊಯ್ದು ಕಾಡಿನಲ್ಲಿ ಬಿಟ್ಟು ಬಾ ಎಂದು' ತಿಳಿಸಿದ್ದನ್ನು, ಆದೇಶಿಸಿದ್ದನ್ನು ಅರುಹುತ್ತಾನೆ. 'ಅಣ್ಣನಾಜ್ಞೆಯಂತೆ ನಿಮ್ಮನ್ನು ಕಾಡಿಗೆ ಕರೆದು ತಂದಿದ್ದೇನೆ. ಇನ್ನು ಮುಂದೆ ನಿಮಗೆ ಎಲ್ಲಿಗೆ ತೋಚುತ್ತದೆಯೋ ಅಲ್ಲಿಗೆ ಹೋಗಿ' ಎಂದು ತಿಳಿಸಿದ ಕ್ಷಣವೇ ತಲ್ಲಣಿಸಿ ಧರೆಗೆ ಉರುಳುತ್ತಾಳೆ. ಲಕ್ಷ್ಮಣನು ತತ್ಕ್ಷಣವೇ ನೀಡಿದ ಆರೈಕೆಯಿಂದ ಚೇತರಿಸಿಕೊಂಡ ಸೀತೆಯ ಜೀವ ರಾಮನ ಕೃತಿಗಾಗಿ ಮರುಗುತ್ತದೆ. ಅಂತಹ ಘೋರ ಶಿಕ್ಷೆಯನ್ನು ವಿಧಿಸಿದ ಕ್ಷಣದಲ್ಲೂ ಅವಳಿಗೆ ರಾಮನಲ್ಲಿದ್ದ ಅನನ್ಯ ಪ್ರೀತಿಗೆ ಧಕ್ಕೆ ಬಾರದೆ, ಅವನನ್ನು ನಿಂದಿಸದೆ, ನಿಷ್ಠುರ ನುಡಿಯದೆ, 'ಖಡ್ಗಕೊಟ್ಟು ಕೊಂದು ಬಾ ಎಂದು ಹೇಳದೆ ಕಾಡಿನಲ್ಲಿ ಬಿಟ್ಟು ಬಾ' ಎಂದು ಕರುಣೆಯನ್ನು ತೋರಿದನೇ ? ಅವನನ್ನು ಅಗಲಿ ಹೇಗೆ ಒಂಟಿಯಾಗಿ ಇಲ್ಲಿ ಬಾಳಲಿ ?' ಎಂದು ಪರಿತಪಿಸುತ್ತಾಳೆ. 'ಕೌಶಿಕನೊಂದಿಗೆ ಮಿಥಿಲೆಗೆ ಬಂದು ನನ್ನನ್ನು ಮದುವೆಯಾದಂದಿನಿಂದ ನನ್ನನ್ನು ಎಷ್ಟು ಚೆನ್ನಾಗಿ ನೋಡಿಕೊಂಡೆ. ನಾನು ಅಗಲಿದರೂ ತಾನು ನೊರಗಿದನಲ್ಲದೆ ಎಂದೂ ಸುಖವನ್ನು ಕಾಣಲಿಲ್ಲ. ನನಗಾಗಿ ಕಪಿಸೇನೆ ಕಟ್ಟಿ,

ರಾವಣನನ್ನು ಮರ್ದಿಸಿ ಅಗ್ನಿಮುಖದಲ್ಲಿ ಪರೀಕ್ಷಿಸಿ ನನ್ನನ್ನು ಒಪ್ಪಿಕೊಂಡವನಿಗೆ ಈಗ ನನ್ನನ್ನು ನಿಷ್ಕಾರಣವಾಗಿ ಅಡವಿಗಟ್ಟಿದನೇ ? ಅವನ ರೂಪ ಲಾವಣ್ಯಗಳನ್ನು, ಸಿರಿಮೊಗವನ್ನು ನೋಡದೆ ಹೇಗೆ ತಾನೇ ಇರಲಿ ? ಅವನನ್ನು, ಭುವನಾಭಿರಾಮನನ್ನು, ಗುಣರತ್ನಧಾಮನನ್ನು, ರಘುಕುಲೋದ್ದಾಮನನ್ನು, ಸತ್ಕೀರ್ತಿಕಾಮನನ್ನು ಶರಣಜನವಾರ್ಧಿಯನ್ನು ನಿರಂತರವಾಗಿ ಸೇವಿಸದೆ ಹೇಗೆ ತಾನೇ ಬಾಳಲಿ ? ಎಂದು ರಾಮನ ಸಾಂಗತ್ಯ ಸುಖ ವಂಚಿತಳಾದುದಕ್ಕೆ ಮತ್ತು ಅವನ ಸೇವೆ ಮಾಡುವ ಭಾಗ್ಯ ತಪ್ಪಿದುದಕ್ಕೆ ರೋದಿಸಿದಳೇ ಹೊರತಾಗಿ, ಅವಳ ಬಾಯಿಂದ ರಾಮನ ಬಗ್ಗೆ ಒಂದಾದರೂ ನಿಷ್ಠುರವಾದ ಮಾತು ಹೊರಡಲಿಲ್ಲ, ನಿಂದೆಯ ವಾಸನೆಯೂ ಸುಳಿಯುವುದಿಲ್ಲ.

ಎಲ್ಲಕ್ಕೂ ಮೀರಿ ಅವಳು "ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ; ಕಡುಪಾತಕಂಗೈದು ಪೆಣ್ಣಾಗಿ ಸಂಭವಿಸಿದೊಡಲಂ ಪೊರೆವುದೆನ್ನೊಳಪರಾಧಮುಂಟು." ಎಂದು ನುಡಿದು ರಾಮನ ಬಗ್ಗೆ ಉದಾತ್ತವಾಗಿ ನಿಂತು ಅವನ ಚಾರಿತ್ರ್ಯಕ್ಕೆ ಒಂದು ಅದ್ಭುತ ಪ್ರಮಾಣ ಪತ್ರವನ್ನು ನೀಡಿ ಅವನೆಲ್ಲ ಅಪರಾಧಗಳಿಗೆ ತೆರೆ ಎಳೆದುಬಿಡುತ್ತಾಳೆ. ಪೆಣ್ಣಾಗಿ ಹುಟ್ಟಿದ್ದೇ ದೊಡ್ಡ ಅಪರಾಧವಾಗಿರುವಾಗ ರಾಮನು ತನಗೆ ನೀಡಿದ ಈ ಶಿಕ್ಷೆ ಅವನ ಅಪರಾಧವಾಗಿ ಅವಳಿಗೆ ಗೋಚರಿಸುವುದೇ ಇಲ್ಲ.

ಅನನ್ಯವಾಗಿ, ಗಾಢವಾಗಿ ಪ್ರೀತಿಸುವಾಗ, ಪ್ರೀತಿಯಿಂದ, ಪ್ರೀತಿಸುವವರಿಂದ ಉಂಟಾಗಬಹುದಾದ ನೋವು, ಹಿಂಸೆಗಳನ್ನು ತಾಳಿಕೊಳ್ಳುವ ಶಕ್ತಿಯನ್ನೂ ರೂಢಿಸಿಕೊಳ್ಳಬೇಕಾಗುತ್ತದೆ. ಪ್ರೀತಿಯಾಳದಲ್ಲಿ ಸುಖ ಇರುವುದಕ್ಕಿಂತ ನೋವೇ ಹೆಚ್ಚಾಗಿ ಇರುವುದು ಅನುಭವಕ್ಕೆ ಬರುತ್ತದೆ. ಪ್ರೀತಿ ಎನ್ನುವುದು ಕೇವಲ ವ್ಯಕ್ತಿಗಳಿಗೆ ಸಂಬಂಧಿಸಿದ್ದು ಮಾತ್ರವಲ್ಲ. ಮೌಲ್ಯಗಳ ಬಗ್ಗೆ, ಆದರ್ಶಗಳ ಬಗ್ಗೆ ಅಪಾರ ಗೌರವ, ಪ್ರೀತಿ, ನಿಷ್ಠೆಗಳನ್ನು ತಳೆದಿದ್ದ ಪಕ್ಷದಲ್ಲಿ ಅವುಗಳಿಗೆ ಭಂಗ ಬಂದಂತಹ ಸನ್ನಿವೇಶಗಳಲ್ಲಿ 'ವ್ಯಕ್ತಿಗಳು, ವ್ಯಕ್ತಿ ಸಂಬಂಧಗಳು ಯಾವುದೂ ಮುಖ್ಯವಾಗುವುದಿಲ್ಲ. ಹಿಂಸೆ, ಸಾವು, ನೋವುಗಳು ಮೌಲ್ಯ ಪ್ರೀತಿಯ

ಬೆನ್ನಲ್ಲೇ ಸಾಗಿ ಬರುವುದರಿಂದ ಅಧೀರರಾಗುವುದಾಗಲೀ, ಹಿಂಜರಿಯುವುದಾಗಲೀ ಸರಿಯಲ್ಲ. ತಾನು ಪ್ರೀತಿಸಿದ, ಪ್ರೀತಿಸುತ್ತಿರುವ ವ್ಯಕ್ತಿಗಳ ಮನಸ್ಸಿಗೆ ಎಷ್ಟು ಆಘಾತವಾಗಬಲ್ಲುದೆಂಬ ಕಲ್ಪನೆಯಿದ್ದೂ, ಮೌಲ್ಯ, ರಕ್ಷಣೆಗೆ ಆದರ್ಶಗಳ ನಿರ್ವಹಣೆಗೆ ತಾವು ನಡೆದುಕೊಳ್ಳುವ ರೀತಿಗಳು, ಕೈಗೊಳ್ಳುವ ನಿರ್ಧಾರಗಳೂ ಸಮರ್ಥನೀಯವಾಗಿಯೇ ಗೋಚರಿಸುತ್ತವೆ. ಜೊತೆಗೆ ಮಾನಸಿಕ, ದೈಹಿಕ ಹಿಂಸೆಗೆ ಒಳಗಾಗುವವರೂ ಕೂಡಾ ತಮ್ಮನ್ನು ಅಂತಹ ಸ್ಥಿತಿಗೆ ದೂಡಿದವರನ್ನೂ, ಅವರ ಬಗ್ಗೆ ತಮ್ಮ ಪ್ರೀತಿ ಅವಿಚ್ಛಿನ್ನವಾಗಿ ಇರುವುದರಿಂದ, ಸಮರ್ಥಿಸುತ್ತಾರೆ. ಅವರು ಒಳಗಾಗುವ ವಿವಶತೆ, ಅಸಹಾಯಕತೆಗಳನ್ನು ಅರ್ಥಮಾಡಿಕೊಳ್ಳುತ್ತಾರೆ. ಹಾಗಾಗಿ ಸೀತೆಗೆ ರಾಮನಿಂದ ಈ ಬಗೆಯ ಶಿಕ್ಷೆಯ ಮೂಲಕ ಅವಮಾನವೆನಿಸಿದರೂ, ತನ್ನ ಪರಿಶುದ್ಧತೆ, ಪಾವಿತ್ರ್ಯತೆಗಳನ್ನು ಪೂರ್ತಿಯಾಗಿ ಒಪ್ಪಿಕೊಂಡಿರಲಾರರೆನಿಸಿದರೂ ಕ್ಷಮಾದಾನ ಮಾಡಿಬಿಡುತ್ತಾಳೆ. ಅದರಲ್ಲಿಯೂ ಸೀತೆಯಂತಹ ಆದರ್ಶ ಹೆಣ್ಣು, ಪತಿಯನ್ನು ಪರದೈವವೆಂದು, ಪಾತಿವ್ರತ್ಯವೇ ಪರಮ ಧರ್ಮವೆಂದೂ, ಅವನ ಅನುಗ್ರಹವೇ ಮಹಾಸಾಧನೆಯೆಂದು ಭಾವಿಸುವಾಗ ಕನಸಿನಲ್ಲಿಯೂ ಕೈ ಹಿಡಿದವನನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲುವಂತೆ ಮಾಡುವುದಕ್ಕೆ ಮುಂದಾಗುವುದೇ ಇಲ್ಲ. ಹೀಗಾಗಿ ಪ್ರೀತಿಯ ಮೂಲಕವಾಗಿ ಬರುವ ಎಲ್ಲ ನೋವುಗಳೂ ಸ್ವಾಗತಾರ್ಹವಾಗುತ್ತವೆ. ಏನಿದ್ದರೂ ಸೀತೆ ಕೇಳಿಕೊಳ್ಳುವಂತೆ, 'ತನ್ನ ಬಿಡಲ್ ಅಪರಾಧಮುಂಟೇ?' ಎಂದು ಸೀತೆಯ ಸ್ಥಿತಿಯಲ್ಲಿನ ಹೆಣ್ಣುಗಳೂ ಕೇಳಿ ಕೊಳ್ಳಬೇಕಾಗುತ್ತದೆ.

★ ★ ★

ನೆಲೆ - ೧೪

# ತಾನವನನಗಲ್ದ ಸಂತಾಪದಿಂ ತಪಿಸುತಿರ್ದೆಂ

ಗಂಡು ಹೆಣ್ಣಿನ ಪ್ರೀತಿಯ ಸಂಬಂಧಗಳೇ ವಿಚಿತ್ರವಾದುದು. ಹೆಣ್ಣು ಒಮ್ಮೆ ಪುರುಷನನ್ನು ಪ್ರೀತಿಸಿದಳೆಂದರೆ ಆ ಪ್ರೀತಿ ಅವಳೆದೆಯಲ್ಲಿ ಶಿಲಾಶಾಸನದಂತೆ ಅಚ್ಚಳಿಯದೆ ಉಳಿದು ಬಿಡುತ್ತದೆ. ಪುರುಷನ ನಿರ್ಲಕ್ಷ್ಯ, ನಿರಾಕರಣೆ, ಸ್ವಾರ್ಥ, ವಿವಾಹಬಾಹಿರ ಸಂಬಂಧಗಳು ಕೆಲವೊಮ್ಮೆ ಕ್ರೌರ್ಯದ ಮನೋಧರ್ಮ, ಪರಿತ್ಯಾಗ-ಏನೆಲ್ಲ ರೀತಿಗಳಲ್ಲಿ ಹಿಂಸೆ, ನೋವು ಅನುಭವಿಸಿದರೂ ಮರೆಯಲಾಗದ ನೆನಪುಗಳನ್ನೇ ನೆಮ್ಮಿ ದೂರದ ಆಸೆ ಹೊತ್ತೋ, ಹತಾಶೆಯೇ ತನ್ನ ಪಾಲಿನ ಲಭ್ಯವೆಂದೋ ಬದುಕನ್ನು ತಪಸ್ಸಿನಂತೆ ಕಳೆಯುತ್ತಾಳೆ. ರಜನೀಶರು ಹೇಳುವಂತೆ ಹೆಣ್ಣಿಗೆ ಗೊತ್ತಿರುವುದು ತನ್ನನ್ನು, ತಾನು ಪ್ರೀತಿಸಿದ ಪುರುಷನಿಗೆ ತೆತ್ತುಕೊಳ್ಳುವುದು. ಸಮರ್ಪಣೆಯ ಭಾವ. ಮಾಲೀಕತನವನ್ನು ಬಿಟ್ಟುಕೊಡುವುದು. ತನ್ನ ಆನಂದವೆಲ್ಲವನ್ನೂ ಅವನಿಗೆ ಧಾರೆಯೆರೆದು ಬಿಡುವುದು. ಆದರೆ ಪುರುಷನ ಪ್ರವೃತ್ತಿ ಹೆಣ್ಣಿನಿಂದ ದೊರೆಯಬಹುದಾದ ಎಲ್ಲವನ್ನೂ ಬಾಚಿಕೊಳ್ಳುವುದು. ಒಡೆತನದ ಮೂಲಕ ದರ್ಪವನ್ನು ಬೀರುವುದು. ಹಕ್ಕುಗಳನ್ನು ಕಸಿದುಕೊಳ್ಳುವುದು."

ಇಂತಹ ಮನೋಧರ್ಮದಲ್ಲಿರುವ ಚಿತ್ರಾಂಗದೆ, ಮಗು ಬಭ್ರುವಾಹನ ತನ್ನ ಗಂಡ ಅರ್ಜುನನೊಂದಿಗೆ ಸಮರದಲ್ಲಿ ಮುಖಾಮುಖಿಯಾದ ಸಂದರ್ಭ ಬಂದಾಗ ಮಗನ ಪ್ರೀತಿ, ಗಂಡನ ಪ್ರೀತಿಯ ದ್ವಂದ್ವ ಸ್ಥಿತಿಯಲ್ಲಿ ಸಿಲುಕಿದಾಗ, ತನ್ನನ್ನು ಮದುವೆಯಾಗಿ ತೊರೆದು ಹೋಗಿ, ವರ್ಷಗಳೇ ಕಳೆದು ಹೋದರೂ ತನ್ನ ಅಸ್ತಿತ್ವದ ಬಗ್ಗೆಯಾಗಲೀ, ತನ್ನ ಸ್ಥಿತಿಯ ಬಗ್ಗೆಯಾಗಲೀ ಒಮ್ಮೆಯಾದರೂ ವಿಚಾರಿಸದ ಗಂಡನ ಪರವಾಗಿ ನಿಂತು ಮಗನನ್ನು ಖಂಡಿಸುವ ತಾಯಿಯ ಮನಸ್ಸಿನ ವಿಚಿತ್ರ ಸ್ಥಿತಿ ಅಚ್ಚರಿ ಮೂಡಿಸುತ್ತದೆ. ದೀರ್ಘಕಾಲದ ನೋವುಂಡು, ತನಗೆ ಅನ್ಯಾಯ ಮಾಡಿದ ಗಂಡನ ಮೇಲೆ ಸೇಡು ತೀರಿಸಿಕೊಳ್ಳಬಹುದಾದ

ಅವಕಾಶವಿದ್ದರೂ ಅವಳ ಹೆಣ್ಣು ಹೃದಯ ಮತ್ತು ಅವಳೊಳಗಿನ ಅನನ್ಯ ಪ್ರೀತಿಗಳು ಅವನೆಡೆಗೇ ತುಡಿಯುತ್ತವೆ. ಮಣಿಪುರದ ಚಿತ್ರವಾಹನನ ಏಕಮಾತ್ರ ಸಂತಾನವಾಗಿದ್ದು, ಗಂಡು ಮಕ್ಕಳಿಲ್ಲದ ಕಾರಣ ಗಂಡು ಮಗುವಿನಂತೆಯೇ ಬೆಳೆಸಿ, ಶಸ್ತ್ರಾಸ್ತ್ರ ವಿದ್ಯೆಗಳನ್ನೆಲ್ಲ ಕಲಿಸಿ, ತನ್ನ ರಾಜ್ಯಕ್ಕೆ ಉತ್ತಾರಾಧಿಕಾರಿಯಾಗುವಷ್ಟು ಸಮರ್ಥಳನ್ನಾಗಿ ರೂಪಿಸಿದ ತಂದೆಯ ಮಗಳಾದ ಚಿತ್ರಾಂಗದೆ ಕಡೆಗೂ ಹೆಣ್ಣು ಮನಸ್ಸಿನಿಂದ ಹೆಣ್ಣೇ ಆಗಿ ಬಿಟ್ಟಿದ್ದಳು.

ಹಿಂದೊಮ್ಮೆ ತೀರ್ಥಯಾತ್ರಾರ್ಥಿಯಾಗಿ ಬಂದ ಅರ್ಜುನನ ಪ್ರೀತಿಗೆ ಸಿಲುಕಿ ತಾನೂ ಮತ್ತು ತನ್ನ ಸೋದರಿಯಂತಿದ್ದ ಉಲೂಪಿ ಇಬ್ಬರೂ ಅರ್ಜುನನ್ನು ಮದುವೆಯಾಗುತ್ತಾರೆ. ಮದುವೆಯ ನಂತರ ಹಸ್ತಿನಾವತಿಗೆ ಮರಳಿದ ಅರ್ಜುನ ಸಂಪೂರ್ಣವಾಗಿ ಇವರಿಬ್ಬರನ್ನೂ ಮರೆತು ಹೋಗುತ್ತಾನೆ ಇವರನ್ನೇ ಮರೆತವನಿಗೆ ಇವನಿಂದ ಹುಟ್ಟಿದ ಬಭ್ರುವಾಹನ, ಇರಾವಂತರು ಮಕ್ಕಳೆಂಬುದನ್ನು ಹೇಗೆ ತಾನೇ ನೆನಪಿನಲ್ಲಿರಲು ಸಾಧ್ಯ ? ಅಂದು ಹೋದವನು ಮತ್ತೆ ಮಣಿಪುರದಲ್ಲಿ ಕಾಣಿಸಿಕೊಂಡದ್ದು ಯಜ್ಞಾಶ್ವದ ಬೆನ್ನಲ್ಲಿ ಎಂದಾಗಲೇ !

ಮಣಿಪುರದರಸನಾಗಿದ್ದ ಚಿತ್ರಾಂಗದೆಯ ಮಗ ಬಭ್ರುವಾಹನ ಯಜ್ಞಾಶ್ವವನ್ನು ಸೆರೆಹಿಡಿದು, ಯುದ್ಧಕ್ಕೆ ಆಹ್ವಾನ ನೀಡುತ್ತಾನೆ. ಪಾಂಡವರ ಕಡೆಯ ವೀರಾಧಿ ವೀರರು, ಅದರಲ್ಲೂ ಅರ್ಜುನನಂತಹವನು ಯಜ್ಞಾಶ್ವದ ಬೆನ್ನಲ್ಲಿ ಬಂದಿರುವ ಕಾರಣ ಹೆಚ್ಚಿನ ಸಿದ್ಧತೆ, ಪರಾಕ್ರಮ ಅನಿವಾರ್ಯವಾದ ಕಾರಣ ಮಂತ್ರಿ ಸಭಾಸದರೊಂದಿಗೆ ಸಮಾಲೋಚನೆ ಮಾಡುತ್ತಾನೆ.ಯುದ್ಧಕ್ಕೆ ಬೇಕಾದ ಸಿದ್ಧತೆಗಳ ಕುರಿತು ಚಿಂತಿಸುತ್ತಾನೆ. ಸಭೆಯಲ್ಲಿ ನಡೆದ ರಾಜಕೀಯ ಕಾರ್ಯ ಕಲಾಪಗಳನ್ನು ಕೇಳಿ ತಿಳಿದ ಚಿತ್ರಾಂಗದೆಗೆ ದುಃಖ ಮತ್ತು ಭಯದಿಂದ ತತ್ತರಿಸುವಂತಾಗುತ್ತದೆ. ತನ್ನ ಮಗ ಯುದ್ಧ ಮಾಡಲು ಹೊರಟಿರುವುದು ತಂದೆಯ ಜೊತೆಗೆ ಎಂಬುದು ತಿಳಿದಿಲ್ಲವಾದ ಕಾರಣ, ಮಗನಿಗೆ ಅರ್ಜುನನ ವಿಷಯ ತಿಳಿಸಿ ವಿರಮಿಸುವಂತೆ ಕೇಳಿಕೊಳ್ಳ ಬೇಕೆಂದೆನಿಸಿ ಸಭೆಗೆ ಬರುತ್ತಾಳೆ.

ಯಜ್ಞಾಶ್ವವನ್ನು ಕಟ್ಟಿರುವುದಕ್ಕೆ ಮಗನ ಪೌರುಷದ ಬಗ್ಗೆ ಹೆಮ್ಮೆ

ಇರಬಹುದಾದರೂ ಅದು ಅವಳ ದೃಷ್ಟಿಯಲ್ಲಿ ಪಿತೃದ್ರೋಹ. ಅವನು ಅರಿಯದೇ ಮಾಡಿದರೂ ದ್ರೋಹ, ದ್ರೋಹವೇ. ಅದನ್ನು ತಪ್ಪಿಸಲು ಮಗನಿಗೆ ಅರ್ಜುನನ ವಿಷಯವನ್ನೆಲ್ಲ ಹೇಳಿದ್ದಷ್ಟೇ ಅಲ್ಲ. ಅವನನ್ನು ಅವನ ಕಾರ್ಯಕ್ಕಾಗಿ ಹಲವು ರೀತಿಯಲ್ಲಿ ನಿಷ್ಠುರವಾಗಿ ನಿಂದಿಸುತ್ತಾಳೆ. 'ಮಗನೆ ಯಜ್ಞಾಶ್ವವನ್ನು ಕಟ್ಟಿ ಬಹಳ ಒಳ್ಳೆಯ ಕೆಲಸ ಮಾಡಿದೆ. ನಿನ್ನ ರಾಜಕಾರ್ಯದ ವೈಖರಿ ಬಹಳ ಚೆನ್ನಾಗಿದೆ. ನೀನು ನನ್ನ ಹೊಟ್ಟೆಯಲ್ಲಿ, ಸಮುದ್ರ ಮಥನದಿಂದ ಹುಟ್ಟಿದ ವಿಷದಂತೆ ಹುಟ್ಟಿದೆ. ನಿನ್ನಿಂದ ನನ್ನ ಸರ್ವನಾಶವಾಯಿತು" ಎಂಬ ತಾಯಿಯ ವ್ಯಂಗ್ಯ ಕ್ರೂರವಾದ ಮಾತುಗಳಿಗೆ ಅರಿಯದೆ ಎಸಗಿದ ಕಾರ್ಯವಾದರೂ, ನಡುಗಿ ಹೋದ. ತಾಯಿಯ ಬದುಕನ್ನು ಹಾಳು ಮಾಡಬೇಕೆಂದಾಗಲೀ, ಅವಳ ಸುಖಕ್ಕೆ ಕಿಚ್ಚಿಡಬೇಕೆಂಬುದಾಗಲೀ ತನ್ನ ಉದ್ದೇಶವಾಗಿರಲಿಲ್ಲ. ಹಾಗಿರುವಾಗ ಅವಳ ಮಾತುಗಳಿಂದ ನೊಂದ ಬಭ್ರುವಾಹನ ವಿನಯದಿಂದ, ತನ್ನ ತಪ್ಪು ಒಪ್ಪಿಕೊಂಡು, ತಾಯಿಯ ಮನಸ್ಸಿಗೆ ಒಪ್ಪದ ಯಾವ ಕಾರ್ಯಕ್ಕೊ ಮುಂದಾಗುವುದಿಲ್ಲವೆಂದು ಭರವಸೆ ನೀಡುತ್ತಾನೆ. ಅರ್ಜುನನ ಬರವಿಗೆಂದು ವರ್ಷಾನುಗಟ್ಟಲೆ ತಪಸ್ಸು ನಿಂದು. ಈಗ ಪುಣ್ಯವಶದಿಂದ ಬಂದವನಿಗೆ ತನ್ನ ಸಮಸ್ತ ರಾಜ್ಯ ಸುಖ ಭೋಗಗಳನ್ನು ಅವನ ಪದತಲಕ್ಕರ್ಪಿಸಿ, ಯುಧಿಷ್ಠರನ ಶತ್ರುಗಳ ಮುಂದೆ ನಿನ್ನ ಪರಾಕ್ರಮ ತೋರಿಸು. ನನ್ನ ಪಾತಿವ್ರತ್ಯಕ್ಕೆ ದುಷ್ಟ ಸಂತಾನದ ದುರ್ಗತಿ ಬಂದಂತೆ ಮಾಡದಿರು' ಎಂದೆಲ್ಲ ಬುದ್ಧಿ ಹೇಳಿ ಕಳುಹಿಸುತ್ತಾಳೆ.

ತಾಯಿಯ ಮಾತಿನಂತೆ ಮಾಡಲು ಹೊರಟ ಬಭ್ರುವಾಹನ ಮತ್ತು ಅವನ ತಾಯಿಗೆ ಅರ್ಜುನನಿಂದ ದೊರೆತ ಮರ್ಯಾದೆಯಾದರೂ ಎಂತಹುದು ! ಮಗನೆಂದು ಪರಿಚಯಿಸಿಕೊಂಡು ಅವನಿಗೆ, ತಂದೆಗೆ ಸಲ್ಲಬೇಕಾದ ಗೌರವವನ್ನು ಸಲ್ಲಿಸಿದರೂ, ಪ್ರದ್ಯುಮ್ನ, ಹಂಸ ಧ್ವಜರು ಅವನನ್ನು ಮಗನೆಂದು ಪರಿಚಯಿಸಿದರೂ ಸುಮ್ಮನಿದ್ದುದನ್ನು ಗಮನಿಸಿ, 'ಇವನು ನಿನ್ನ ಮಗ ಪರಿಗ್ರಹಿಸಿ ಮನ್ನಿಸು ಎಂದು ಹೇಳಿದರೂ ಲೆಕ್ಕಿಸದೆ, 'ತನ್ನ ಮಗನಾಗಿದ್ದ ಪಕ್ಷದಲ್ಲಿ ಕ್ಷಾತ್ರಧರ್ಮದಂತೆ ಯುದ್ಧ ಮಾಡುತ್ತಿದ್ದನೇ ಹೊರತಾಗಿ ಈ ರೀತಿ ಬಂದು ಕಾಲು ಹಿಡಿಯುತ್ತಿರಲಿಲ್ಲ. ಇವನು ವೈಶ್ಯ

ಸಂಜಾತ, ಕುಲಗೇಡಿ, ಹೇಡಿ, ಇವನ ತಾಯಿ ಯಾವನೋ ಗಂಧರ್ವನ ಹೆಂಡತಿ, ನರ್ತಕಿ-ಇಂತಹ ತಾಯಿಯ ಮಗನಾದ ಇವನ ಕೈಯ್ಯಲ್ಲಿ ಆಯುಧಗಳು ಶೋಭಿಸುವುವೇ ? ಚತುರಂಗ ಸೇನೆ, ಛತ್ರ ಚಾಮರ ರಾಜ್ಯ ಕೋಶಗಳು ಇವನಂತಹವನಿಗೆ ಶೋಭೆಯಲ್ಲ. ಯುದ್ಧದಲ್ಲಿ ಗೆಲ್ಲುವ ಭರವಸೆಯಿಲ್ಲದ ಕಾರಣ ಈ ನಾಟಕ !' ಎಂದು ಬಭ್ರುವಾಹನನ್ನೂ, ತಾಯಿಯನ್ನೂ ಸೇರಿಸಿ ಒಟ್ಟಿಗೆ ಕಟಕಿಯಾಡಿದನು. ಪರಾಕ್ರಮಶಾಲಿಯಾದ ಬಭ್ರುವಾಹನ ತಾಯಿಯ ಮೇಲಿನ ಪ್ರೀತಿಯಿಂದಾಗಿ ಎಲ್ಲವನ್ನೂ ಸಹಿಸಿಕೊಂಡು ಬೈಗುಳ ನಂಜನ್ನು ನುಂಗಿದ. ತನ್ನನ್ನು ಮಗನೆಂದು ಒಪ್ಪಿಕೊಳ್ಳುವುದಿರಲಿ, ಅವನ ನಿರೀಕ್ಷೆಯಲ್ಲಿ ವರ್ಷಗಳಿಂದಲೂ ವಿರಹಿಣಿ, ತಪಸ್ವಿನಿಯಾಗಿ ಅವನ ಹಾದಿ ಕಾಯುತ್ತ ಬದುಕುತ್ತಿರುವ ತಾಯಿಯ ಬಗ್ಗೆ ಇಷ್ಟು ನಿಕೃಷ್ಟವಾಗಿ, ಹೀನವಾಗಿ, ಅಪಶಬ್ದಗಳನ್ನು ನುಡಿದದ್ದನ್ನು ಆತ್ಮಗೌರವ, ಸ್ವಾಭಿಮಾನಗಳಿಂದ ಕೂಡಿದ ಬಭ್ರುವಾಹನನಿಗೆ ಸೈರಿಸಿಕೊಳ್ಳುವುದು ಅಸಾಧ್ಯವೆನಿಸುತ್ತದೆ. ತಾಯಿಯ ಪ್ರೀತಿ ಒಂದೆಡೆಯಾದರೆ ತನ್ನ ಪೌರುಷ, ಆತ್ಮಗೌರವಗಳಿಗೆ ಒಡ್ಡಿದ ಸವಾಲು ಮತ್ತೊಂದು ಕಡೆ ! ಇಂತಹ ಸಂದಿಗ್ಧದಲ್ಲಿ ಯುದ್ಧವೇ ಅನಿವಾರ್ಯವೆನಿಸುತ್ತದೆ. ಎಷ್ಟೇ ಪ್ರಯತ್ನಪಟ್ಟರೂ ತನ್ನ ಪೌರುಷದ ಅಹಂಕಾರದಲ್ಲಿ ಬೀಗುತ್ತಿರುವ ಅರ್ಜುನನಿಗೆ ವರ್ಷಗಳಹಿಂದೆ ಪ್ರೀತಿಸಿ, ಮದುವೆಯಾಗಿ, ತೊರೆದು ಹೋದವನಿಗೆ ತಾನು ಪ್ರೀತಿಸಿದ್ದ ಚಿತ್ರಾಂಗದೆ ಉಲೂಪಿಯರ ನೆನಪಾದರೂ ಹೇಗೆ ಬಂದೀತು ?

ತಂದೆ ಮಕ್ಕಳ ಕಾಳಗಕ್ಕೆ ಅಚ್ಚರಿಗೊಂಡು ಅಷ್ಟದಿಕ್ಪಾಲಕರೇ ಬಂದು ನಿಲ್ಲುತ್ತಾರೆ. ಸಮ ಬಲರ ಸೆಣಸಾಟ ನೋಡುವವರ ಕಣ್ಣಿಗೆ ಸವಿಯೂಟವಾಗುತ್ತದೆ. ತನ್ನ ತಂದೆ ಇವನೆಂಬ ಅರಿವಿನೊಂದಿಗೆ ಇದ್ದ ಬಭ್ರುವಾಹನ ಮಾರಕಾಸ್ತ್ರಗಳನ್ನು, ಪ್ರಾಣಕ್ಕೆ ಸಂಚಕಾರ ಬಾರದ ತೆರದಲ್ಲಿ ಅತ್ಯಂತ ಜಾಣ್ಮೆಯಿಂದ ಪ್ರಯೋಗಿಸುತ್ತಾನೆ. ಪಾಂಡವರ ಕಡೆಯಲ್ಲಿನ ಅತಿರಥ ಮಹಾರಥರನ್ನು, ಅನುಸಾಲ್ವ, ವೃಷಕೇತು, ಸುವೇಗ, ಅನಿರುದ್ಧ, ಕೃಪ, ಸಾತ್ಯಕಿ, ಕೃತವರ್ಮ ಮೊದಲಾದವರೆಲ್ಲರೂ ಬಭ್ರುವಾಹನಿಂದ ಸೋತರು ಇಲ್ಲವೆ ಸಾವನ್ನಪ್ಪಿದರು. ಅರ್ಜುನನೇ ನೇರವಾಗಿ ಬಭ್ರುವಾಹನನೊಂದಿಗೆ ಸೆಣಸಾಟಕ್ಕೆ ನಿಲ್ಲುವುದು ಅನಿವಾರ್ಯವಾಯಿತು.

ಆದರೂ ಬಭ್ರುವಾಹನ ತಂದೆಯೆದುರು ತನ್ನನ್ನು ದುರ್ಬಲ ವಾಗಿಸಿಕೊಂಡು ಬಾಣಾಘಾತಗಳಿಗೆ ಒಪ್ಪಿಸಿಕೊಳ್ಳುತ್ತಾನೆ. ತಾನೇ ಸೋತಂತೆ ವರ್ತಿಸುತ್ತಿದ್ದೇನೆಂಬುದನ್ನು ಅರ್ಥ ಮಾಡಿಕೊಳ್ಳದೆ, ಅದನ್ನು ತನ್ನ ಹೇಡಿತನವೆಂದು ಭಾವಿಸುತ್ತಿದ್ದಾನೆಂದೆನಿಸಿ ಮೈ ಕೊಡವಿಕೊಂಡು ಎದ್ದು ಅರ್ಜುನನ ಮೇಲೆ ಬಾಣ ಪ್ರಯೋಗ ಮಾಡಿ, ನಿರ್ವೀರ್ಯನನ್ನಾಗಿ ಮಾಡಿ, ಕರ್ಣನನ್ನು ಕೊಂದು ಅನ್ಯಾಯ ಮಾಡಿದ್ದು ಸಾಕು. ಹಗೆತನವನ್ನು ಮುಗಿಸಿ, ಬದುಕಿನ ಮೇಲೆ ಆಸೆಯಿದ್ದಲ್ಲಿ ಯುದ್ಧದಿಂದ ವಿರಮಿಸಿ ಹೋಗೆಂದು ಬುದ್ಧಿ ಹೇಳುತ್ತಾನೆ.' ಆದರೂ ಬುದ್ಧಿಗೇಡಿಯಾದ, ಅಹಂಕಾರಿಯಾದ ಅರ್ಜುನ ತನ್ನ ಅವಿವೇಕ, ಅಹಂಕಾರಗಳಿಂದ ಪ್ರಾಣಕ್ಕೆ ಸಂಚಕಾರ ತಂದುಕೊಳ್ಳುತ್ತಾನೆ.

ಬಭ್ರುವಾಹನನಿಗೆ ತಂದೆಯನ್ನು ಕೊಲ್ಲಬೇಕೆಂಬ ಉದ್ದೇಶ ವಿಲ್ಲವಾದರೂ ಕೊಲೆಯಾಗುವ ಸನ್ನಿವೇಶ ಅರ್ಜುನನಿಂದಲೇ ನಿರ್ಮಾಣವಾಗುತ್ತದೆ. ಆದರೆ ಅಸಹಾಯಕತೆ, ವಿರ್ವಾತಗಳಿಂದ ಕೊಲ್ಲಬೇಕಾಗಿ ಬಂದರೂ ತಾಯಿಯ ಆಕ್ರೋಶ ದುಃಖಗಳಿಗೆ ಅವನನ್ನೇ ಕಾರಣವಾಗಿಸುತ್ತದೆ. ವಿಜಯೋತ್ಸಾಹದಿಂದ ಅರಮನೆ ಪ್ರವೇಶಿಸಿದ ಬಭ್ರುವಾಹನನಿಗೆ ಅದ್ಭುತ ಸ್ವಾಗತ ದೊರೆಯುತ್ತದೆ. ಎದುರು ಬಂದ ತಾಯಿಗೆ ಗೌರವ ಸೂಚಿಸಿ, ತನ್ನ ಈ ಕಾರ್ಯ ವಿವಶತೆಯ ಪರಿಣಾಮವೆಂದು ತಿಳಿಸಿ ಹೇಳಲು ಪ್ರಯತ್ನಿಸುತ್ತಾನೆ. 'ತನ್ನನ್ನು ಮಗನೆಂದು ಪರಿಚಯಿಸಿಕೊಂಡರೂ, ಒಪ್ಪದೆ ಕೋಪದಿಂದ ಸಿಡಿದೆದ್ದುದೇ ಅಲ್ಲದೆ, ತಾಯಿಯನ್ನು ಅವಳ ಪಾತಿವ್ರತ್ಯವನ್ನು ಅವಮಾನಕರವಾದ ಮಾತುಗಳಿಂದ ಹಿಯಾಳಿಸಿದನಾಗಿ, ಅವನ ತಲೆಯನ್ನು ಕತ್ತರಿಸಿ ತಂದಿರುವೆನೆಂದು ಹೇಳಲು, ದುಃಖ ಉಮ್ಮಳಿಸಿ ಪಿತೃಹತ್ಯೆಯನ್ನು ಮಾಡಿ, ತನಗೆ ವೈಧವ್ಯವನ್ನು ತಂದು ಕೊಟ್ಟೆಯಲ್ಲಾ ಎಂದು ನಿಂದಿಸಿ ವಿಲಪಿಸುತ್ತಾಳೆ. ಅರ್ಜುನನ ಬಗ್ಗೆ ಬೆಳೆಸಿಕೊಂಡಿದ್ದ ಅತಿಯಾದ ಪ್ರೀತಿಯ ವ್ಯಸನದಿಂದ ಅವಳ ವಿವೇಕ ಸತ್ತು ಹೋಗಿದೆ. ವಿಚಾರಮಾಡಿ ಯಾವುದು ಸರಿ ಯಾವುದು ಸರಿಯಲ್ಲವೆಂಬುದನ್ನು ತೀರ್ಮಾನಿಸಲಾಗದ ಅಸಹಾಯಕತೆ ಅವಳದಾಗಿದೆ. ಅದಕ್ಕೆಂದೇ ಮಗನೆಂಬ ಮೋಹ ಪ್ರೀತಿಗಳನ್ನು ಬದಿಗಿರಿಸಿ, ಅವನ ವಿವಶತೆಯನ್ನು ಯೋಚಿಸದೆ." ಹಾ! ಮಗನೇ, ನೀನು ನನ್ನ ಮುತ್ತೈದೆತನಕ್ಕೆ

ಸಂಚಕಾರವನ್ನಿತ್ತೆ. ಮಂಗಳಕರವಾದ ಈ ಮಾಂಗಲ್ಯ, ಪವಿತ್ರವಾದ ಕಿವಿಯ ಓಲೆಗಳು ಏಕೆಂದು ಬಗೆದೆಯಾ ? ಅವುಗಳನ್ನು ನನ್ನಿಂದ ತೊಲಗಿಸಿ ದೂರ ಮಾಡಿದೆಯಾ. ನನ್ನ ಶ್ರೀಕರವಾದ ಅರಿಶಿನ ಕುಂಕುಮದ ಭಾಗ್ಯವನ್ನು ಒರೆಸಿಬಿಟ್ಟೆಯಾ.... ಇನ್ನು ನಾನು ಬದುಕಿ ಫಲವೇನು, ನಿನ್ನ ಹೆತ್ತ ಪುಣ್ಯವೇ ಸಾಕು" ಎಂದು ವ್ಯಂಗ್ಯ ವಿಷಾದಗಳಿಂದ ನುಡಿದು ಮಗನನ್ನೇ ಅಪರಾಧಿ ಯಾಗಿ ನಿಲ್ಲಿಸುತ್ತಾಳೆ. ಅಕಾರ್ಯವನ್ನು ಮಾಡಿ ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನೇ ತನ್ನೆಲ್ಲ ಸಂತೋಷ. ಸೌಭಾಗ್ಯಗಳಿಗೆ ಎರವಾದನೆಂಬುದು ಚಿತ್ರಾಂಗದೆಯ ನಂಬಿಕೆ.

ಚಿತ್ರಾಂಗದೆಗೆ ಪುತ್ರ ಪ್ರೇಮಕ್ಕಿಂತಲೂ ಪತಿ ಪ್ರೇಮವೇ ಮುಖ್ಯವಾಗುತ್ತದೆ. ಅವನ ಪ್ರೀತಿ. ಆ ಪ್ರೀತಿಯಿಂದ ನಿರ್ಮಿಸಿಕೊಂಡ ದಾಂಪತ್ಯದ ಬಂಧನ ಎಲ್ಲವೂ ಪ್ರೀತಿಸುವ ಹೆಣ್ಣಿಗೆ ತುಂಬ ಅಪ್ಯಾಯಮಾನ. ಚಿತ್ರಾಂಗದೆ, ಉಲೂಪಿಯರು ಅರ್ಜುನನಿಂದ ಒಳಗಾದ ನಿರ್ಲಕ್ಷ್ಯ. ತಾತ್ಸಾರಗಳನ್ನು ಮನಸ್ಸಿಗೇ ತಂದು ಕೊಳ್ಳದಿರುವುದು ವಿಚಿತ್ರವೆನಿಸುತ್ತದೆ. ಭಾರತೀಯ ಸ್ತ್ರೀ ಪರಂಪರೆಯನ್ನು ಪ್ರತಿನಿಧಿಸುವ ಇಂತಹ ಹೆಣ್ಣುಮಕ್ಕಳು ಭಾರತೀಯ ಸಮಾಜದಲ್ಲಿ ಅಪರಿಮಿತ ಸಂಖ್ಯೆಯಲ್ಲಿದ್ದಾರೆ. ಸ್ವಾಭಿಮಾನಿಯಾದ ಯಾವ ಹೆಣ್ಣೂ ಇಂತಹ ನಿರ್ಲಕ್ಯವನ್ನು ಸಹಿಸಿಕೊಳ್ಳುವುದಿಲ್ಲವಾದರೂ ಭಾರತೀಯ ಪರಂಪರೆ ಹುಟ್ಟು ಹಾಕಿರುವುದು ಇಂತಹ ಹೆಣ್ಣುಗಳನ್ನೇ, ಒಮ್ಮೆ ಪ್ರೀತಿಸಿ ಮದುವೆಯಾದರೆ ಮುಗಿಯಿತು. ಗಂಡಂದಿರ ಅವಹೇಳನ ಕಾರ್ಯ, ಹಿಂಸೆ, ನಿರ್ಲಕ್ಷ್ಯ ನಿರಾಕರಣೆ ತಾತ್ಸಾರ, ಪರಿತ್ಯಾಗ ಮುಂತಾದ ಶಿಕ್ಷೆಗಳನ್ನೂ ಮೌನವಾಗಿ ಸಹಿಸಿಕೊಳ್ಳುತ್ತಾರೆ. ಇದೆಲ್ಲಕ್ಕೂ ತಮ್ಮ ಪೂರ್ವಾರ್ಜಿತ ಕರ್ಮಫಲ ವಿಶೇಷವೇ ಕಾರಣವೆಂದು ಬಲವಾಗಿ ನಂಬುತ್ತಾರೆ. ಹೊರತಾಗಿ ಪ್ರಶ್ನಿಸುವುದಿಲ್ಲ. ಚಿತ್ರಾಂಗದೆ ಉಲೂಪಿಯರಂತಹವರು ಸಾವಿರಾರು ಮಂದಿ ನಮ್ಮ ಕಾವ್ಯ ಪುರಾಣಗಳಲ್ಲಿ ಮಾತ್ರವಲ್ಲ. ನಮ್ಮ ಸುತ್ತಲಿನ ಸಮಾಜದಲ್ಲಿಯೂ ಕಾಣಸುತ್ತಾರೆ. ಷಂಡರೂ, ಭಂಡರೂ ಆದ ಗಂಡರನ್ನೂ ತಾಳಿಕೊಂಡು ಬದುಕುವುದು ನಮ್ಮ ಸ್ತ್ರೀಯರ ಮನೋಧರ್ಮ. ಪುರುಷರ ಪ್ರೀತಿಯನ್ನು ಅನುಮಾನಿಸುವಂತಿಲ್ಲ.

ಒಂದಿಷ್ಟು ಪ್ರೀತಿ ತೋರಿದರೆ ಸಾಕು. ಅದು ತಮ್ಮ ಬದುಕಿನಲ್ಲಿ ಅಕ್ಷಯ ನಿಧಿ ಎಂದು ಭಾವಿಸುವ ಹುಂಬತನ ಅವರದು. ಪುರುಷರಿಗಿಂತ ತಾವು ಎಂದೆಂದಿಗೂ ಕಡಿಮೆ ಎಂಬ ಭಾವನೆ ಅವರಲ್ಲಿ 'ಕೀಳರಿಮೆ' ಪ್ರವೃತ್ತಿಯನ್ನು ಪೋಷಿಸಿದೆ. ಅದಕ್ಕೆ ಪುರುಷನು ಮಾಡುವ ಪ್ರತಿಯೊಂದು ಅಕಾರ್ಯವೂ ಸಮರ್ಥನೀಯ ಪ್ರಶ್ನಾತೀತ. ರಾಮನನ್ನು ಎಷ್ಟೊಂದು ಗಾಢವಾಗಿ ಪ್ರೀತಿಸಿ, ಅವನೊಡನೆ, ರಾಜಭೋಗ ಸುಖಗಳೆಲ್ಲವನ್ನು ತೊರೆದು ಹದಿನಾಲ್ಕು ವರ್ಷ ವನವಾಸಕ್ಕೆ ಹೊರಟು ಎಲ್ಲ ಬಗೆಯ ಕಷ್ಟಗಳಲ್ಲಿ ಸಮ ಪಾಲು ಹಂಚಿಕೊಂಡ ಸೀತೆಯ ಮೇಲೆ ಅನುಮಾನಿಸಿ ಅವಳ ಪ್ರೀತಿ, ಪಾತಿವ್ರತ್ಯಗಳನ್ನೇ ಅವಮಾನಿಸಿದ ರಾಮ' ಅಷ್ಟಕ್ಕೇ ನಿಲ್ಲದೆ ಅವಳನ್ನು ಕಾಡಿಗಟ್ಟಿ ಪರಿತ್ಯಾಗ ಮಾಡಿದ !! ಜೂಜಿನಲ್ಲಿ ರಾಜ್ಯೈಶ್ವರ್ಯಗಳನ್ನು ಕಳೆದುಕೊಂಡು ಉಟ್ಟ ಬಟ್ಟೆಯಲ್ಲಿ ಹೊರಟು ತಲೆಮರಿಸಿಕೊಳ್ಳಬೇಕಾಗಿ ಬಂದ ನಳ ತನ್ನೊಡನೆ ಬಂದ ದಮಯಂತಿಯನ್ನು ಅರಣ್ಯದಲ್ಲಿ ಅಸಹಾಯಕಳನ್ನಾಗಿ ತೊರೆದು ಹೋದ ! ಆದರೂ ಈ ಹೆಂಗಸರು ತಮ್ಮ ವಿಧಿಯನ್ನು ಹಳಿದರೇ ಹೊರತು ತಾವು ಪ್ರೀತಿಸಿದ ಗಂಡಂದಿರನ್ನು ತೊರೆಯಲಿಲ್ಲ. ಸೀತೆ ಬೇಸರಗೊಂಡು ಭೂಮಿಯೊಳಗೆ ಸೇರಿದಳು. ದಮಯಂತಿ ಮತ್ತೆ ನಳನನ್ನು ಕೂಡಿದಳು.

ಚಿತ್ರಾಂಗದೆ, ಉಲೂಪಿಯರದೂ ಇದೇ ಹಣೆಬರಹ. ಅವನ ಸಾವಿಗಾಗಿ ಅಳಲಿನ ಕೋಡಿ ಹರಿಸಿದರು. ಅವನು ತಮ್ಮನ್ನು ಮರೆತು ತೊರೆದು ಹೋದುದನ್ನೂ ಮರೆತು ಅವನಿಗಾಗಿ ಹಲುಬಿದರು. ತಾಯಂದಿರ ಅಳಲು, ಮಗನಲ್ಲಿ ಪಾಪ ಪ್ರಜ್ಞೆಯ ಬೆಂಕಿಯನ್ನು ಪ್ರಜ್ವಲಿಸಿದವು. ಪಿತೃಹತ್ಯೆಯ ಪಾಪಕ್ಕಾಗಿ ಅಗ್ನಿ ಪ್ರವೇಶಕ್ಕೂ ಮುಂದಾಗುತ್ತಾನೆ.

ಪತಿ ಪ್ರೀತಿಯ ಅನನ್ಯತೆ, ಅದಮ್ಯತೆಗಳು ಪುತ್ರ ಪ್ರೀತಿಯನ್ನೂ ಮುಸುಕುಗೊಳಿಸುವ ಈ ಚಿತ್ರಾಂಗದೆ ಉಲೂಪಿಯರ ಪ್ರಸಂಗ ಕನ್ನಡದ ವೈಷ್ಣವ ಮಹಾಕವಿಗಳಲ್ಲಿ ಒಬ್ಬನಾಗಿರುವ ಲಕ್ಷ್ಮೀಶ ತನ್ನ 'ಜೈಮಿನಿ ಭಾರತ'ದಲ್ಲಿ ಅದ್ಭುತವಾಗಿ ಚಿತ್ರಿಸಿದ್ದಾನೆ. ಈ ಜೈಮಿನಿ ಭಾರತದಲ್ಲಿ ಇಂತಹ ಅನೇಕ ಪ್ರಸಂಗಗಳು ಬರುತ್ತವೆ. ತಂದೆ ಮಕ್ಕಳು ಸಮರದಲ್ಲಿ

ಮುಖಾ ಮುಖಿಯಾಗುವ ಸನ್ನಿವೇಶಗಳು ಏರ್ಪಡುವ ಹಿನ್ನಲೆಯನ್ನು ತನ್ನ ಅದ್ಭುತವಾದ ಕಥನ ಕೌಶಲ್ಯದಿಂದ ವಿವರಿಸಿದ್ದಾನೆ. ಅರ್ಜುನ ಬಭ್ರುವಾಹನ, ತಂದೆ-ಮಗ ಎದುರಾದಂತೆ ರಾಮನಿಗೆ ತನ್ನ ಮಕ್ಕಳಾದ ಲವ-ಕುಶರೊಂದಿಗೂ ಎದುರಾಗಬೇಕಾದ ಅನಿವಾರ್ಯತೆಯನ್ನು, ಸೀತಾ ಪ್ರಸಂಗದ ಕತೆಯೊಂದಿಗೆ ಎತ್ತಿ ತೋರಿಸುತ್ತಾನೆ.

ಬಭ್ರುವಾಹನ ತನ್ನ ಚಿಕ್ಕ ತಾಯಿಯಾದ ಉಲೂಪಿಯ ನಿರ್ದೇಶದಂತೆ ಸಂಜೀವಕಮಣಿ ತಂದು ತಂದೆಯನ್ನು ಪುನರ್ಜೀವಿತ ಗೊಳಿಸುತ್ತಾನೆ. ಎಲ್ಲವೂ ಕತೆಯಲ್ಲಿ ಸುಖಾಂತವಾಗುತ್ತದೆ. ಚಿತ್ರಾಂಗದೆ, ಉಲೂಪಿಯರ ವಿಚಾರವೆಲ್ಲ ತಿಳಿದು ಕೃಷ್ಣ, ಭೀಮ, ಕುಂತಿ ಮೊದಲಾದವರೆಲ್ಲ ಅವರನ್ನು ಒಪ್ಪಿಕೊಳ್ಳುವಂತೆ ಅರ್ಜುನನ್ನು ಒತ್ತಾಯಿಸುತ್ತಾರೆ. ಬಭ್ರುವಾಹನನಿಂದ ಸಕಲ ಮರ್ಯಾದೆಗಳನ್ನು ಪಡೆದು ಹಸ್ತಿನಾವತಿಗೆ ತೆರಳುತ್ತಾರೆ. ಪರಸ್ಪರರು ಪಶ್ಚಾತ್ತಾಪದಿಂದ ಶುದ್ಧರಾಗಿ, ತಂದೆ ಮಕ್ಕಳ ಗಂಡ-ಹೆಂಡತಿಯರ ಸಂಬಂಧಗಳು, ಮುಸುಕು ಗೊಂಡ ಪ್ರೀತಿ, ಅನುಭೂತಿಗಳು ಮರುಜೀವ ಪಡೆಯುತ್ತವೆ. ಚಿತ್ರಾಂಗದೆ, ಉಲೂಪಿಯರ ತಪಸ್ಸು ಫಲಿಸುತ್ತದೆ. ಸ್ತ್ರೀ ಪುರುಷ ಪ್ರೀತಿಯ ಸಂಬಂಧದಲ್ಲಿ ನೋವು-ವಿರಹ, ದುಃಖ ಸಾಮಾನ್ಯವಾಗಿ ಅನಿವಾರ್ಯ ಸ್ಥಿತಿಗಳೆಂಬುವಕ್ಕೆ ಚಿತ್ರಾಂಗವೆ ಉಲೂಪಿ ಪ್ರಸಂಗವೇ ನಿದರ್ಶನವಾಗಿದೆ.

★ ★ ★

ನೆಲೆ - ೧೫

# ಒಳಿತಪ್ಪ ಅಗ್ಗಳ ವಸ್ತುವೆಲ್ಲಂ ಪೃಥ್ವಿಯ ನಾಳ್ವಂಗಕ್ಕುಂ

'ಪ್ರೀತಿ' ಎನ್ನುವುದರ ಅರ್ಥದ ಬಗ್ಗೆ ಆಲೋಚಿಸಿದಾಗ ಪ್ರೀತಿ ಎನ್ನುವ ಪದದಲ್ಲಿ ಬಯಕೆ, ನನಗೆ ಬೇಕಾದ್ದು ನನ್ನ ಸ್ವಂತದ್ದು ಎನ್ನುವ ಅನೇಕ ಅರ್ಥಗಳು ಹೊರಡುತ್ತವೆ. ಒಬ್ಬ ವ್ಯಕ್ತಿಯನ್ನೋ. ಒಂದು ವಸ್ತುವನ್ನೋ ಬಯಸಿದಾಗ ಅಥವಾ ಪ್ರೀತಿಸಿದಾಗ ಅದರ ಮೇಲೆ ಒಡೆತನವನ್ನು ಪಡೆಯುವ ಪ್ರಯತ್ನ ಅದಾಗಿರುತ್ತದೆ. ಆ ಒಡೆತನವನ್ನು ಸ್ಥಾಪಿಸುವಾಗ ಯಾರ ಹಂಗು, ಹಕ್ಕು, ನೀತಿ, ಅನೀತಿಯ ಕಲ್ಪನೆಯೇ ನಮಗೆ ಬರುವುದಿಲ್ಲ. ಎಂತಹ ಸದಾಚಾರಿಯೇ ಆಗಿರಲಿ, ಸದ್ಗುಣಿಯೇ ಆಗಿರಲಿ ಒಮ್ಮೆ ಒಂದನ್ನು ಪ್ರೀತಿಸತೊಡಗಿದಾಗ ಅದನ್ನು ಪಡೆಯಲೇ ಬೇಕೆಂಬ ಒಂದು ಬಗೆಯ ಕೆಟ್ಟ ಛಲದಿಂದಾಗಿ, ಸಾಮ,ದಾನ, ಭೇದ-ದಂಡಾದಿ ಚತುರೋಪಾಯಗಳನ್ನು ಇಲ್ಲವೆ ಹಿಂಸೆ, ಕ್ರೌರ್ಯದ ಮಾರ್ಗಗಳನ್ನು ಪಾಪಪ್ರಜ್ಞೆ, ಅಪರಾಧಿ ಪ್ರಜ್ಞೆಯಿಂದಲೂ ದೂರವಾಗಿ, ಪಡೆಯಲು ಮುಂದಾಗುತ್ತೇವೆ.

ಒಬ್ಬ ಪುರುಷ ಹೆಣ್ಣೊಂದನ್ನು ಬಯಸಿದಾಗಲಂತೂ ಬಲಾತ್ಕಾರದಿಂದಲಾದರೂ ಸರಿ ಎಳೆದುಕೊಂಡು ಬಂದು ತನ್ನ ಪ್ರೀತಿ, ಬಯಕೆಗಳನ್ನು ತೀರಿಸಿಕೊಳ್ಳುತ್ತಾನೆ. ಅದೇ ಹೆಣ್ಣು ಪುರುಷನನ್ನು ಬಯಸಿದಾಗ ನಯವಂಚನೆ, ನಟನೆಗಳಿಂದ ಇಲ್ಲವೇ ಬೆದರಿಕೆಯಿಂದ ಪಡೆದುಕೊಳ್ಳುತ್ತಾಳೆ. ಹೀಗಾಗಿ ಇಂತಹ ಸಂದರ್ಭಗಳಲ್ಲಿ ಕಾಣಿಸಿಕೊಳ್ಳುವ ಪ್ರೀತಿಯಲ್ಲಿ ಸ್ವಾರ್ಥ, ಹಿಂಸೆ, ಬಲಾತ್ಕಾರಗಳು ಅನಿವಾರ್ಯವಾಗಿ ಬಿಡುತ್ತದೆ. ಇಂತಹ ಸ್ವರೂಪದ ಪ್ರೀತಿಯನ್ನು, ಕನ್ನಡದ ಪ್ರಪಥಮ ಗದ್ಯ ಗ್ರಂಥವಾದ ಶಿವಕೋಟಾಚಾರ್ಯನ 'ವಡ್ಡಾರಾಧನೆ' ಕೃತಿಯಲ್ಲಿ ಬರುವ 'ಕಾರ್ತಿಕ ಋಷಿಯ ಕಥೆ' ಎಂಬ ಕತೆಯಲ್ಲಿ ಕಾಣಬಹುದು. ವಡ್ಡಾರಾಧನೆ ಜೈನಧರ್ಮ ಬೋಧಕವಾದ ಅನೇಕ ಕಥಾ ಪ್ರಸಂಗಗಳನ್ನು ಒಳಗೊಂಡಿದೆ. ಅವುಗಳಲ್ಲಿ ಒಂದಾದ ಕಾರ್ತಿಕ ಋಷಿಯ ಕತೆಯಲ್ಲಿ ತಂದೆಯಾದವನೇ

ಮಗಳನ್ನು ಪ್ರೀತಿಸಿ ಮದುವೆಯಾದ ಸಂದರ್ಭದ ವಿವರಣೆಯಿದೆ. ತಾಯಿ-ಮಗ, ತಂದೆ ಮಗಳು, ಅಣ್ಣ-ತಂಗಿ ಇಂತಹ ಸಾಮಾಜಿಕವಾಗಿ ಒಪ್ಪಿತವಲ್ಲದ ಸಂಬಂಧಗಳನ್ನು ಕಥಾವಸ್ತುವಾಗಿವುಳ್ಳ ಕತೆಗಳು, ನಾಟಕಗಳು ಜಾಗತಿಕ ಸಾಹಿತ್ಯದಲ್ಲಿ ಅಪರೂಪವಾಗಿ ಕಾಣಿಸಿಕೊಂಡಿವೆ. ಅವುಗಳಲ್ಲಿ 'ಸೊಪ್ರೋಕ್ಲೆಸ್' ನ 'ಈಡಿಪಸ್' ಹೆಸರಿನ ತ್ರಿವಳಿ ನಾಟಕವು ಜಗತ್ತಿನಲ್ಲೇ ಅತ್ಯಂತ ಪ್ರಸಿದ್ಧವಾಗಿದ್ದು ಅಲ್ಲಿ ಬರುವ ತಾಯಿ-ಮಗನ ಸಂಬಂಧದಿಂದ ಉಂಟಾದ ಉತ್ಪಾತಗಳು, ದುರಂತಗಳು, ಪ್ರಜ್ಞಾಪೂರ್ವಕವಲ್ಲದ ರೀತಿಯಲ್ಲಿನ ಸಂಬಂಧಗಳಾದರೂ ಪಾಪದ ಪರಿಣಾಮವೆಂದೇ ಭಾವಿಸಲಾದವು. ಅಂದಿನಿಂದ ಸಾಹಿತ್ಯದಲ್ಲಿ 'ಈಡಿಪಸ್ ಕಾಂಪ್ಲೆಕ್ಸ್' ಎನ್ನುವುದು ಆಧುನಿಕ ಕವಿಸಮಯದಂತಹ ಪರಿಕಲ್ಪನೆಯಾಯಿತು. ಈಡಿಪಸ್‌ನ ಕತೆಯಲ್ಲಿ 'ತಾಯಿ-ಮಗ' ತಮ್ಮ ಮೂಲ ಸಂಬಂಧವರಿಯದೆ, ಅಥೆನ್ಸ್‌ನ ಮೇಲೆ ಎರಗಿದ ಆಪತ್ತನ್ನು ಪರಿಹರಿಸಿದ ಕಾರಣ 'ಈಡಿಪಸ್'ನಿಗೆ ದೊರೆ ಕ್ರೇಯಾನ್ ತನ್ನ ತಂಗಿಯನ್ನು (ವಿಧವೆಯಾದವಳು) ಮದುವೆ ಮಾಡಿಕೊಟ್ಟು ರಾಜ್ಯವನ್ನು ಒಪ್ಪಿಸಿಬಿಡುತ್ತಾನೆ. ಮುಂದೆ ಮಕ್ಕಳೂ ಹುಟ್ಟಿ ಬೆಳೆದು ದೊಡ್ಡವರಾಗುತ್ತಾರೆ. ಅರಿಯದೆ ಉಂಟಾದ ಸಂಬಂಧವಾದರೂ, ದೈವಕ್ಕೆ ಎಲ್ಲವೂ ತಿಳಿದಿದ್ದ ಕಾರಣ, ಮುನಿದು ಆ ದೇಶಕ್ಕೆ ಭಯಂಕರ ಬರಗಾಲವನ್ನು ಉಂಟುಮಾಡುತ್ತದೆ. ಇದಕ್ಕೆ ಕಾರಣ ತಿಳಿದು ಪರಿಹಾರ ಮಾಡಬೇಕೆಂದು ಕೊಂಡ ಈಡಿಪಸ್ ಭವಿಷ್ಯಕಾರನನ್ನು ಕರೆದು ಕೇಳುತ್ತಾನೆ. ಮೊದಲು ಕಾರಣ ಹೇಳಲು ನಿರಾಕರಿಸಿದರೂ ನಂತರ ದೊರೆಯೇ ಕಾರಣವೆಂದು ತಿಳಿಸುತ್ತಾನೆ. ತಂದೆಯ ಸಾವಿಗೆ ಮಗು ಕಾರಣವಾಗುತ್ತದೆಂದು ಈಡಿಪಸ್‌ನನ್ನು ತೊರೆಯಲಾಗಿತ್ತು. ಆದರೆ ಅದೇ ಈಡಿಪಸ್ ವಿಧಿವಶಾತ್ ಬದುಕುಳಿದು ಭವಿಷ್ಯದಂತೆ ತಂದೆಯ ಕೊಲೆ, (ತನಗೆ ತಿಳಿಯದಂತೆಯೇ) ಮಾಡುತ್ತಾನೆ; ತನಗೆ ತಿಳಿಯದೆಯೇ ತಾಯಿಯನ್ನೇ ಮದುವೆಯಾಗಿರುತ್ತಾನೆ. ತಿಳಿದ ನಂತರ ಒಂದು ದೊಡ್ಡ ದುರಂತ ಪರಂಪರೆಯೇ ಮುಂದುವರೆಯುತ್ತದೆ. ಗ್ರೀಕರಿಗೆ ದೈವ, ವಿಧಿಗಳ ಬಗ್ಗೆ ಅಪಾರ ನಂಬಿಕೆ. ಅವರ ಪ್ರೇರಣೆಯಂತೆಯೇ ಎಲ್ಲ ದುರಂತಗಳೂ ಸಂಭವಿಸುತ್ತವೆ.

ಆದರೆ 'ಕಾರ್ತಿಕ ಋಷಿಯ ಕಥೆ' ಯಲ್ಲಿ ತಿಳಿದೂ ತಿಳಿದೂ ಇಂತಹ ಸಂಬಂಧವೊಂದು ಏರ್ಪಡುತ್ತದೆ. ಭರತ ಕ್ಷೇತ್ರದ ಲಾಳ ದೇಶದಲ್ಲಿ ಕೃತ್ತಿಕಾಪುರ ವೆಂಬುದೊಂದಿದ್ದು ಅದನ್ನು ಅಗ್ನಿರಾಜನೆಂಬ ಅರಸು ಆಳುತ್ತಿದ್ದ. ಅವನ ಮಹಾರಾಣಿ, ವೀರಮತಿಗೆ ಅವನಿಂದ ಆರು ಮಂದಿ ಹೆಣ್ಣು ಮಕ್ಕಳು ಹುಟ್ಟಿದರು. ಸತಿ ಸುತೆಯರೊಡನೆ ಸಕಲ ಭೋಗಗಳನ್ನು ಅನುಭವಿಸುತ್ತಲಿದ್ದ ಅಗ್ನಿರಾಜ ತನ್ನ ಮಕ್ಕಳೊಂದಿಗೆ ಫಾಲ್ಗುಣ ಮಾಸದಲ್ಲಿ ಉಪವಾಸವಿದ್ದು, ಬಸದಿಗೆ ಹೋಗಿ ಅರ್ಚಿಸಿ ಅಲ್ಲಿದ್ದ ಋಷಿಗಳಿಗೆ ವಂದಿಸಿ ಪ್ರಸಾದವನ್ನು ತಂದೆ ತಾಯಿಯರಿಗೆ ನೀಡುವಾಗ ತನ್ನ ಆರು ಮಂದಿ ಮಕ್ಕಳಲ್ಲಿ ಕಿರಿಯಳಾದ ಕೀರ್ತಿಕೆಯನ್ನು ನೋಡಿದ ಕೂಡಲೇ ಅವನಿಗೆ ಅವಳ ಬಗ್ಗೆ ಪ್ರೀತಿ ಮೂಡುತ್ತದೆ. ಅವಳ ಪ್ರೀತಿ ಮೋಹವಶನಾಗಿ ಹೇಗಾದರೂ ಅವಳನ್ನು ಪಡೆಯಲೇ ಬೇಕೆಂದು ಮನಸ್ಸಿನಲ್ಲಿ ನಿರ್ಧರಿಸುತ್ತಾನೆ. ಅವಳ ಪ್ರೀತಿಯಿಂದ ತಣಿಯದ ಹೊರತು ಅವನಿಗೆ ಸಮಾಧಾನವಾಗುವಂತಿಲ್ಲ. ಹಾಗೆಂದು ತಾನೇ ಮುಂದುವರೆದು ಮಗಳನ್ನು ಮದುವೆಯಾದರೆ ಲೋಕ ನಿಂದಿಸೀತು. ಆದ್ದರಿಂದ ತನ್ನ ಕೃತಿಗೆ ತರ್ಕಬದ್ಧ ಸಮರ್ಥನೆ ಒದಗಿಸಿಕೊಳ್ಳಲು ಮಡದಿ ವೀರಮತಿ ಮಹಾದೇವಿ, ಮತ್ತು ಧರ್ಮಶಾಸ್ತ್ರ ಬಲ್ಲವರುಗಳನ್ನು ಕರೆ ಕಳುಹುತ್ತಾನೆ. ಅವರೆಲ್ಲರ ಮುಂದೆ ಅಗ್ನಿರಾಜನು 'ನನ್ನ ಆಳ್ವಿಕೆಯ ವ್ಯಾಪ್ತಿಯೊಳಗೆ ಬರುವ ಒಳ್ಳೊಳ್ಳೆಯ ವಸ್ತುಗಳು ಯಾರಿಗೆ ಸೇರಿತ್ತವೆ?' ಎಂದು ಪ್ರಶ್ನೆಯನ್ನು ಮುಂದೊಡ್ಡುತ್ತಾನೆ. ರಾಜನ ಈ ಪ್ರಶ್ನೆಯ ಹಿನ್ನಲೆಯಲ್ಲಿನ ಇಂಗಿತವನ್ನು ಗ್ರಹಿಸದ ಅವರೆಲ್ಲರೂ ಆನೆ, ಕುದುರೆ, ಮುತ್ತು ಮಾಣಿಕ್ಯಗಳಲ್ಲಿ ಸ್ತ್ರೀ ರತ್ನಗಳೆಲ್ಲವೂ ಆ ಪ್ರದೇಶದ ಅರಸನಿಗೇ ಸಲ್ಲುತ್ತವೆ ಎಂದು ಯಾವುದೇ ಅನುಮಾನವಿಲ್ಲದೆ ಹೇಳುತ್ತಾರೆ. ಮತ್ತೆ ಅರಸ ಋಷಿಗಳನ್ನೂ ವಿಚಾರಿಸಿದಗ, ನೀವು ಯಾವ ವಸ್ತುಗಳ ಬಗ್ಗೆ ಹೇಳುತ್ತಿರುವಿರಿ ಎಂಬುದು ತಿಳಿದರೆ ತಕ್ಕುದೊ ತಕ್ಕುದಲ್ಲವೊ ಎಂದು ಹೇಳಲು ಅನುಕೂಲ ವಾಗುತ್ತದೆಂದು ಹೇಳಲು, ರಾಜನಿಗೆ ತನ್ನ ಬಯಕೆ ಏನೆಂಬುದನ್ನು ಹೇಳಿದರೆ ಖಂಡಿತವಾಗಿಯೂ ಇವರಿಂದ ಒಪ್ಪಿಗೆ ದೊರೆಯಲಾರದೆನಿಸಿ ಅವರೆಲ್ಲರನ್ನೂ ಹೊರಗೆ ಕಳಿಸಿ ಮಿಕ್ಕವರನ್ನು ಕೇಳಲು. ಒಳ್ಳೆಯ ವಸ್ತುಗಳೆಲ್ಲಕ್ಕೂ ಅರಸನೇ ಒಡೆಯನೆಂಬುದನ್ನು ಮತ್ತೆ ಮತ್ತೆ ಹೇಳಲು ರಾಜನು ಸಂತೋಷಿಸಿದನು.

ಮಡದಿ ವೀರಮತಿಗೆ ತನ್ನ ಬಯಕೆಯನ್ನು, ತನ್ನ ಮಗಳ ಮೇಲಿದ್ದ ಪ್ರೀತಿಯನ್ನು ತಿಳಿಸಿ ಬಲವಂತದಿಂದ ಒಪ್ಪಿಸಿ ಮದುವೆಯಾಗುತ್ತಾನೆ. ಇಂತಹ ಅಕಾರ್ಯದಿಂದ ಬೇಸತ್ತ ವೀರಮತಿ ಮದುವೆಯ ದಿನವೇ ನಿರ್ವೇದಗೊಂಡು ಬ್ರಹ್ಮಚರ್ಯವನ್ನು ಸ್ವೀಕರಿಸಿದಳು.

ತಂದೆ ಮಗಳ ಈ ಅನೈತಿಕ ಸಂಬಂಧದಿಂದ ಕಾರ್ತೀಕನೆಂಬ ಮಗನೂ ವೀರಶ್ರೀ ಎಂಬ ಮಗಳು ಹುಟ್ಟಿದರು. ವೀರಶ್ರೀಗೆ ಕ್ರೌಂಚನೆಂಬ ಅರಸನೊಂದಿಗೆ ಮದುವೆಯೂ ಆಯಿತು. ದಿನಕಳೆದಂತೆ ಕಾರ್ತೀಕ ಮತ್ತು ಅವನ ತಮ್ಮಂದಿರಾದ ನಮಿ ಮುಂತಾದವರೊಡನೆ ತನ್ನ ಇತರ ಗೆಳೆಯರೊಂದಿಗೆ ಆಟವಾಡುವ ಸಂದರ್ಭದಲ್ಲಿ, ವಸಂತ ಕಾಲದಲ್ಲಿ, ಅಜ್ಜಂದಿರ ಮನೆಗಳಿಂದ ಅವರೆಲ್ಲರಿಗೆ ಬಟ್ಟೆ, ಬರೆ ತಿಂಡಿ ತಿನಿಸುಗಳು ಬಂದುದರ ಬಗ್ಗೆ ಹೇಳಲು ಕಾರ್ತೀಕನಿಗೆ ತನ್ನ ಅಜ್ಜನ ಮನೆಯ ನೆನಪಾಗುತ್ತದೆ.ಇಲ್ಲಿಯವರೆಗೆ ಅಮ್ಮ ಅಜ್ಜನ ಮನೆಯ ಬಗ್ಗೆ ಪ್ರಸ್ತಾಪವನ್ನೇ ಮಾಡಿರಲಿಲ್ಲ. ಆದ್ದರಿಂದ ವನಕ್ರೀಡೆಯನ್ನು ಗೆಳೆಯರೊಂದಿಗೆ ಮುಗಿಸಿ ಮನೆಗೆ ಬಂದುದೇ 'ಅಮ್ಮ ನಿನಗೆ ತಂದೆಯೂ ನನಗೆ ಅಜ್ಜನೂ ಆಗಿರುವವನು ಇರುವನೋ ಇಲ್ಲವೋ ?' ಎಂದು ಪ್ರಶಿಸುತ್ತಾನೆ. ಮಗನ ಈ ಪ್ರಶ್ನೆಗೆ ತಾಯಿ ಏನೆಂದು ಉತ್ತರಿಸಬಲ್ಲಳು. ಆದರೂ ಉತ್ತರಿಸುವುದು, ಅಜ್ಜನ ವಿಚಾರ ಹೇಳುವುದು ಅನಿವಾರ್ಯವಾಗುತ್ತದೆ. ಎದೆಯಲ್ಲಿ ತುಂಬು ಸಂಕಟವಿದ್ದರೂ ಹೇಳುತ್ತಾಳೆ. "ಮಗುವೇ ನಿನಗೆ ಯಾರು ತಂದೆಯಾಗಿದ್ದಾರೋ. ಅವರೇ ನನಗೂ ತಂದೆಯಾಗಿದ್ದಾರೆ. ಎಂದು ನೋವಿನಿಂದ ತಿಳಿಸಿ ಹೇಳಲು ಹದಿನಾರು ವರುಷದ ಬಾಲಕ ಕಾರ್ತೀಕನ ಮನಸ್ಸಿನಲ್ಲಿ ಆ ಕ್ಷಣವೇ ವೈರಾಗ್ಯ ಭಾವ ಮೂಡುತ್ತದೆ. ಶ್ರೀವರರೆಂಬ ಆಚಾರ್ಯರ ಜೊತೆಯಲ್ಲಿಯೇ ತಪಸ್ಸು ಮಾಡಿ ನಂತರ ಗುರುಗಳ ಆದೇಶ ಪಡೆದು ಏಕವಿಹಾರಿಯಾಗಿ ನಗರ, ಖೇಡ, ಖರ್ವಾಡಗಳಲ್ಲಿ ಸಂಚರಿಸುತ್ತ ಹೋಗುತ್ತಾನೆ.

ನಮ್ಮ ಭಾರತೀಯ ಪರಂಪರೆಯಲ್ಲಿ ದುರಂತಗಳಲ್ಲಿ ಮಾಡಿದ ಪಾಪಕ್ಕೆ ಪಶ್ಚಾತ್ತಾಪವೇ ಪರಿಹಾರವಾಗುತ್ತದೆ.ಕಾರ್ತೀಕನಿಗೆ, ತಾನು ಅನೈತಿಕ ಅಥವಾ ಪಾಪ ಸಂಬಂಧದಿಂದ ಹುಟ್ಟಿದವನೆಂಬುದು

ತಿಳಿಯುತ್ತಿದ್ದಂತೆ ಕೋಪ, ಸೇಡು ಅನಿಷ್ಟ ಪರಂಪರೆಗೆ ಆಹ್ವಾನವಾದರೆ ವಿರಕ್ತಿ 'ನಿರುಪದ್ರವಿ' ಮನಃಸ್ಥಿತಿ. ಇದರಿಂದಾಗಿ ತನ್ನನ್ನು ತಾನು ಶುದ್ಧ ಮಾಡಿಕೊಳ್ಳು ವುದಾಗುತ್ತದೆ. ಗ್ರೀಕರಲ್ಲಿ ಕಾಣಿಸಿದಂತೆ ದೈವ ಇಲ್ಲಿ ಕ್ರೂರವಲ್ಲ. ಪಾಪದ ಅರಿವು, ಪರಿತಾಪಗಳೇ ಪರಿಹಾರಗಳಾಗುತ್ತವೆ. ಅನ್ಯಾಯಕ್ಕೆ ಒಳಗಾದವರೂ ಮೌನವಾಗಿ ಸಹಿಸಿಕೊಳ್ಳುತ್ತಾರೆ. ಮನಸ್ಸಿಗೆ ಒಪ್ಪದ ಈ ಅನೈತಿಕ ಸಂಬಂಧವನ್ನು ಕೃತಿಕೆಯೂ ಪ್ರತಿಭಟಿಸುವುದಿಲ್ಲ. ಆದರೆ ನಮ್ಮದೇ ಕಾವ್ಯ ಪರಂಪರೆಯಲ್ಲಿ, ಹೆಣ್ಣು ಗಂಡು ಸಂಬಂಧಗಳಲ್ಲಿ ಅನೈತಿಕತೆ ಕಾಣಿಸಿಕೊಂಡ ಕೂಡಲೇ ಸಿಡಿದೇಳುವ, ಸಿಟ್ಟಾಗುವ, ಶಾಪಕ್ಕೆ ಗುರಿ ಮಾಡುವ ಗಂಡರೂ, ಗಂಡಂದಿರೂ ಇದ್ದಾರೆ. ಜಿತೇಂದ್ರಿಯರೆನಿಸಿಕೊಂಡ ಋಷಿ ಮುನಿಗಳು ಕೂಡಾ ತೀರಾ ಲೌಕಿಕರೆನಿಸುವಂತೆ ಕ್ಷಣದ ಭಾವಾವೇಶ, ಉದ್ವೇಗಗಳಿಗೆ ಒಳಗಾಗಿ ತಪಸ್ಸಿನಿಂದ ಸಾಧಿಸಿಕೊಂಡ ಸಂಯಮವನ್ನೂ ಚೆಲ್ಲಿ ಬಿಡುತ್ತಾರೆ.

ರಾಮಾಯಣದಲ್ಲಿ ಕಾಣುವ ಗೌತಮ ಅಹಲ್ಯೆಯರ ಪ್ರಸಂಗದಲ್ಲಿ 'ದಾಂಪತ್ಯದೊಳಗಿನ ಪ್ರೀತಿಯ ಮುಖವನ್ನು ಕಾಣಬಹುದು. ಪ್ರೀತಿ ವಿವಾಹ ಪೂರ್ವದಲ್ಲಿದ್ದೂ ವಿವಾಹನಂತರವೂ ಮುಂದುವರೆಯ ಬಹುದು ಇಲ್ಲವೇ ವಿವಾಹದ ನಂತರವೇ ಸಹಬಾಳ್ವೆಯಿಂದಾಗಿ ಪ್ರೀತಿ ಮೊಳೆತು ಗಟ್ಟಿಗೊಳ್ಳಬಹುದು. ಇಬ್ಬರಲ್ಲೂ ಸಮಾನ ಪ್ರೀತಿ ಇದ್ದಲ್ಲಿ ಬದುಕು ಸೌಖ್ಯ, ಸಂತೋಷಗಳನ್ನು ಕಾಣಬಲ್ಲದು. ಒಬ್ಬರನ್ನೊಬ್ಬರು ಅರ್ಥ ಮಾಡಿಕೊಂಡು ಬಯಕೆ ನಿರೀಕ್ಷೆಗಳನ್ನು ಪರಸ್ಪರರು ಪೂರೈಸಿದಾಗ ಇನ್ನೊಂದನ್ನು ಬಯಸುವ, ಪ್ರೀತಿಸುವ ಅವಕಾಶವೇ ಇರುವುದಿಲ್ಲ. ಆದರೆ ಗೌತಮ ಅಹಲ್ಯೆಯರ ಸಂಬಂಧದಲ್ಲಿ ಗೌತಮನಿಗೆ ಪತ್ನಿ ಪ್ರೀತಿಗಿಂತಲೂ 'ಇಂದ್ರ ಪದವಿ' ಯ ಮೇಲೇ ಹೆಚ್ಚು ಪ್ರೀತಿ. ಹೀಗಾಗಿ ಅಹಲ್ಯೆಯ ಪ್ರೀತಿಗೆ ಪ್ರತಿಕ್ರಿಯೆ ದೊರೆಯುವುದಿಲ್ಲ. ಹೆಣ್ಣು-ಗಂಡು ನಡುವಿನ ಪ್ರೀತಿಯಲ್ಲಿ ' ದೈಹಿಕ ಸುಖ' ದ ಕಾಮನೆಯಿದೆ. ಆ ಸುಖದ ತೃಪ್ತಿಯ ಮೂಲಕವೇ ಪ್ರೀತಿಯ ಅಭಿವ್ಯಕ್ತಿಯಾಗುತ್ತದೆ. ಆದರೆ ಗೌತಮ ಅಹಲ್ಯೆ ಬಯಸುವ ಪ್ರೀತಿಯನ್ನು, ಧರ್ಮ ಸಂಯಮಿತವೂ ದಾಂಪತ್ಯ ಜನ್ಯವೂ ಆದರೂ ನೀಮದಲ್ಲಿ ನಿರ್ಲಕ್ಷ್ಯ ತೋರುತ್ತಾನೆ. ಎಂದೂ ಕೈ ಹಿಡಿದ ಅವಳ ಪ್ರೀತಿಯನ್ನು

ಗ್ರಹಿಸದೇ ಹೋಗುತ್ತಾನೆ. ಆದರೆ ಅಹಲ್ಯೆ ಅದಕ್ಕಾಗಿ ಹಲುಬುತ್ತಾಳೆ. ಹಂಬಲಿಸುತ್ತಾಳೆ. ಗಂಡನಿಂದ ತನ್ನ ಪ್ರೀತಿಯ ಮತ್ತು ದೇಹಸುಖದ ಅದಮ್ಯತೆ, ತಣಿಯದೆ ಹೋದಾಗ ಹೊರಗಿನಿಂದ ಸಿಗಬಹುದಾದ ಸಾಧ್ಯತೆಗಳತ್ತ ಮನಸ್ಸು ಚಿಂತಿಸುತ್ತದೆ. ಇಂತಹ ಸಮಯದಲ್ಲಿ ಮೆದು ಮಣ್ಣಿನಂತಿರುವ ಮನಸ್ಸಿನ ಮೇಲೆ ಯಾರಾದರೂ ಹಗುರವಾಗಿ ಹೆಜ್ಜೆ ಇಟ್ಟರೂ ಅದು ಗುರುತು ಮೂಡಿಸಿಯೇ ಬಿಡುತ್ತದೆ. ಇಂದ್ರನ ವೈಭವಕ್ಕೆ ಮರುಳಾಗಿ, ಇಂದ್ರನಿಗೆ ತನ್ನನ್ನು ಒಪ್ಪಿಸಿಕೊಂಡು ತಾನು ಬಯಸಿದ ತೃಪ್ತಿ, ಸುಖಗಳನ್ನು ಪಡೆಯುತ್ತಾಳಾದರೂ ನಂತರ ಎದುರಿಸಿದ ಪರಿಣಾಮ ಮಾತ್ರ ಅವಳ ಪಾಲಿಗೆ ಭಯಂಕರವೆನಿಸುತ್ತದೆ. ಕಲ್ಲಾಗಿಯೋ, ನಿರ್ದೇಹಗಾಳಿಯಾಗಿಯೋ ಶಿಕ್ಷೆ ಅನುಭವಿಸ ಬೇಕಾಗುತ್ತದೆ. ಸ್ತ್ರೀ-ಪುರುಷ ಪ್ರೀತಿಗೆ ವೈವಾಹಿಕ ಚೌಕಟ್ಟು ಒದಗಿತೆಂದರೆ, ಅದರಾಚೆಗೆ ಜಿಗಿಯಲು ಮೀರಿ ಹೊರಟಿರಲು ಯಾರಿಗೂ ಅವಕಾಶವಿಲ್ಲವಾದರೂ ಪುರುಷನಿಗೆ ಈ ಚೌಕಟ್ಟು ಮೀರಿ ಅನ್ಯ ಸ್ತ್ರೀ ಸಂಬಂಧಗಳನ್ನು ಹೊಂದಿರಲು ಸಾಮಾಜಿಕ ಪರವಾನಗಿ ಇದೆಯೇ ಹೊರತಾಗಿ ಸ್ತ್ರೀಗೆ ಅದರಾಚೆ ಬರಲು ಯಾವುದೇ ಬಗೆಯ ರಿಯಾಯಿತಿಗಳು ಇಲ್ಲ. ಪಾತಿವ್ರತ್ಯ ಮೌಲ್ಯವನ್ನು ಎತ್ತಿ ಹಿಡಿವ, ಆರಾಧಿಸುವ ನಮ್ಮ ಸನಾತನ ಭಾರತೀಯ ಪರಂಪರೆಯಲ್ಲಿ ಪತಿ ದ್ರೋಹ, ವಿವಾಹೇತರ ಸಂಬಂಧಗಳು ಎಂದಿಗೂ ಕ್ಷಮಾರ್ಹವಲ್ಲ. ಆದ್ದರಿಂದಲೇ ಶಾಪಗಳು ಕೊಲೆಗಳು ಹೆಣ್ಣಿನ ಬಗ್ಗೆ ಮಾನ್ಯವಾಗುತ್ತವೆ. ಗಂಡು ಒಡೆಯ, ಹೆಂಡತಿ ಒಡವೆ ಎಂಬ ಭಾವನೆಯು ಬೇರು ಬಿಟ್ಟಿರುವುದರಿಂದಲೇ ಒಡವೆ ಯಾವಾಗಲೂ ಒಡೆಯನಿಗೆ ಸೇರಿದ್ದುದ್ದರಿಂದ ಒಡೆಯನಲ್ಲಿಯೇ ಇರಬೇಕೆಂದು ಹೆಂಡತಿಯನ್ನು ಗಂಡನ ಶವದೊಂದಿಗೆ ಸುಟ್ಟು, ಸ್ವರ್ಗದಲ್ಲಿ ಅವನ ಜೊತೆ ಸೇರಲು ಸತಿ ಪದ್ಧತಿ ಹೆಸರಿನಲ್ಲಿ ರವಾನಿಸುತ್ತಿದ್ದುದು !! ಇದೆಲ್ಲ ಇದ್ದರೂ 'ಪ್ರೀತಿ'ಯ ಅದಮ್ಯತೆ ಎಲ್ಲವನ್ನೂ ಮರೆತು ಮುಂದುವರೆಯುತ್ತದೆ. ಸಾಮಾಜಿಕವಾಗಿ ಒಪ್ಪಿತವಲ್ಲದಿದ್ದರೂ, ಕತೆ, ಕಾವ್ಯಗಳಲ್ಲಿ ಮಾತ್ರವಲ್ಲ, ದೈನಂದಿನ ಜೀವನದಲ್ಲಿ, ಸಾಮಾಜಿಕ ಪರಿಸರದಲ್ಲಿ ತಂದೆ ಮಗಳು, ಅಣ್ಣ-ತಂಗಿ, ಅಮ್ಮ-ಮಗ ಇತ್ಯಾದಿ ಅನೈತಿಕ ಸಂಬಂಧಗಳನ್ನು ಕಾಣುತ್ತಿದ್ದೇವೆ. ಅಣ್ಣ, ತಂಗಿ, ತಾಯಿ ಮಗ, ಸಂಬಂಧ ಅಪರೂಪವಾದರೂ ತಂದೆ ಮಗಳ ಸಂಬಂಧಗಳು, ಪ್ರೀತಿ ಕಾಮಗಳ

ರೂಪದಲ್ಲಿ ಸುದ್ದಿಯಾಗುತ್ತಿರುವುದು ಇತ್ತೀಚೆಗೆ ಸಾಮಾನ್ಯವಾಗಿದೆ. ಈ ಸಂಬಂಧಗಳಲ್ಲಿ ನಿರುಪದ್ರವಿ ಪ್ರೀತಿಗಿಂತ, ದೇಹ ಮತ್ತು ಬದುಕಿಗೆ ಕ್ಷತಿಯುಂಟು ಮಾಡುವ ಲೈಂಗಿಕ ಹಲ್ಲೆಗಳೇ ಅತಿಯಾಗಿವೆ. ಆದರೆ ಸುಸಂಸ್ಕೃತ, ಸುಶಿಕ್ಷಿತ ಪುರುಷರ ಮನಸ್ಸಿನಲ್ಲಿ 'ಈಡಿಪಸ್ ಕಾಂಪ್ಲೆಕ್ಸ್' ಎಂಬುದೊಂದಿದ್ದು, ಶಿಷ್ಟಾಚಾರವನ್ನು ಮೀರಿ ವರ್ತಿಸಲಾಗದೆ, ತಮ್ಮೊಳಗೇ ತಾವು ನರಳುವ ಸ್ಥಿತಿಗೆ ಒಳಗಾಗಿರುತ್ತಾರೆ. ನಿಜವಾದ ಕಾರಣ ತಿಳಿಯಲಾಗದೆ ಮನೋರೋಗದಿಂದ ಮತ್ತು ಮನಸ್ಸಿನ ವಿಕ್ಷಿಪ್ತತೆಯೊಂದಿಗೆ ನವೆಯುತ್ತಾರೆ. ಪ್ರೀತಿಗೆ ಎಲ್ಲೆ ಕಟ್ಟುಗಳಿಲ್ಲ, ನೀತಿ ನಿಯಮಗಳಿಲ್ಲ, ಸಂಬಂಧಗಳ ಸಂಯಮವೂ ಇಲ್ಲ. ಇಂತಹ ಅದ್ಭುತ ಸ್ವರೂಪದ ಪ್ರೀತಿಯೇ ಎಲ್ಲ ಕಲೆ, ಸಾಹಿತ್ಯಗಳ ಹಿಂದಿನ ಪ್ರಬಲ ಪ್ರೇರಣೆಯಾಗಿದೆ.

★ ★ ★

ನೆಲೆ - ೧೬

# ಕರಿಬ್ಯಾಡೋ ಸಂಗ ನನ್ನ

ಪ್ರೀತಿಯ ಬಹುಮುಖತೆಯನ್ನು ಕಾಣಿಸುವ ಕಥಾನಕಗಳಿಂದ ನಮ್ಮ ಜನಪದ ಸಾಹಿತ್ಯ ಶ್ರೀಮಂತವಾಗಿದೆ. ಅನೇಕ ಸಂಬಂಧಗಳ ನೆಲೆಯಲ್ಲಿ ಪ್ರೀತಿಯಿದ್ದರೂ, ಗಂಡು ಹೆಣ್ಣಿನ ಪ್ರೀತಿ ಕೇಂದ್ರಿತ ಕಥೆಗಳು ಯಾವುದೇ ಸಾಹಿತ್ಯದಲ್ಲಿ ಅತ್ಯಂತ ರಮ್ಯ ಮತ್ತು ರೋಮಾಂಚಕಾರಿಯಾಗಿವೆ. ಗಂಡು -ಹೆಣ್ಣುಗಳ ನಡುವಿನ ಪ್ರೀತಿಯಲ್ಲಿ ಅನನ್ಯತೆ ಮತ್ತು ಗಾಢತೆಗಳು ಇರುವಂತೆಯೇ ಕಾರಣಾಂತರಗಳಿಂದ, ಕೆಲವು ಒತ್ತಡಗಳಿಂದ ನಂಬಿಕೆ ದ್ರೋಹ ,ಮೋಸ, ವಂಚನೆಗಳು, ಸೇಡು, ಪ್ರತೀಕಾರಗಳೂ ಅನಿವಾರ್ಯವಾಗಿ ಸೇರಿಕೊಂಡಿರುತ್ತವೆ. ಕೆಲವು ಚಿಂತಕರ ಪ್ರಕಾರ 'ಪ್ರೀತಿ' ಎನ್ನುವುದರ ಅರ್ಥ ತನ್ನದಾಗಿಸಿಕೊಳ್ಳುವುದು, ವಶಕ್ಕೆ ತೆಗೆದುಕೊಳ್ಳುವುದು; ಹಕ್ಕು ಅಥವಾ ಅಧಿಕಾರ ಸ್ಥಾಪಿಸಿಕೊಳ್ಳುವುದು. ಹೀಗಿರುವಾಗ ಒಮ್ಮೊಮ್ಮೆ ತಾನು ಪ್ರೀತಿಸುವ ವ್ಯಕ್ತಿ ಅಥವಾ ವಸ್ತು ಕೈ ಜಾರಿ ಹೋದಾಗ, ಪ್ರೀತಿ ಎಷ್ಟು ಗಾಢವಾಗಿರುತ್ತದೆಯೋ ಅಷ್ಟೇ ಏಕೆ ಅದಕ್ಕಿಂತ ಹೆಚ್ಚೇ ದ್ವೇಷವಾಗಿ ಪರಿವರ್ತಿತವಾಗುತ್ತದೆ. ಪರಿಣಾಮವಾಗಿ ಪ್ರೀತಿಯ ವ್ಯಕ್ತಿಯನ್ನೋ ಅಥವಾ ಪ್ರೀತಿಸಿದ ವ್ಯಕ್ತಿಯನ್ನು ಕಸಿದುಕೊಂಡವರನ್ನೋ ದುರಂತದ ಪ್ರಪಾತಕ್ಕೆ ತಳ್ಳುವ ಸಾಧ್ಯತೆಗಳೇ ಹೆಚ್ಚಾಗಿರುತ್ತವೆ. ಅದರಲ್ಲಿಯೂ ಹೆಣ್ಣು ವಿವಾಹಬಾಹಿರ ಸಂಬಂಧವನ್ನು ಹೊಂದಿರುವಳೆಂಬ ಅನುಮಾನ ಬಂದರೂ ಸಾಕು, ಹಾದರದ ಆರೋಪದ ಮೇಲೆ ಆ ಹೆಣ್ಣನ್ನು ಬಹಿಷ್ಕಾರದ ಶಿಕ್ಷೆಗೋ, ಸಾವಿನ ಶಿಕ್ಷೆಗೋ ಒಳಪಡಿಸುವುದಲ್ಲದೆ, ಅವಳನ್ನು ಪ್ರೀತಿಸಿದ ಗಂಡನನ್ನೂ ಕ್ರೂರವಾಗಿ ಶಿಕ್ಷಿಸಲಾಗುತ್ತದೆ. ತಾನು ಪ್ರೀತಿಸಿದ ವ್ಯಕ್ತಿ ಅಥವಾ ವಸ್ತು ತನಗಿಲ್ಲದ ಮೇಲೆ ಯಾರಿಗೂ ಅದು ಕೈಗೆ ಸಿಗಬಾರದೆಂಬ ರೊಚ್ಚಿನ ಮನಃಸ್ಥಿತಿಯೇ ಅದಕ್ಕೆ ಕಾರಣವಾಗುತ್ತದೆ.

ಈ ವಿವರಣೆಯ ಹಿನ್ನೆಲೆಯಲ್ಲಿ ಅತ್ಯಂತ ಜನಪ್ರಿಯವಾದ

ಬಯಲಾಟ ಸಂಗ್ಯಾ ಬಾಳ್ಯಾದಲ್ಲಿ ಬರುವ 'ಸಂಗ್ಯಾ' ನ ದುರಂತವನ್ನು ಗಮನಿಸಿದರೆ 'ಪ್ರೀತಿ' ಎಂತಹ ಕ್ರೌರ್ಯಕ್ಕೆ ದಾರಿ ಮಾಡಬಲ್ಲುದೆಂಬ ಅಂಶ ಸ್ಪಷ್ಟವಾಗುತ್ತದೆ. ಈ ಕಥಾಪ್ರಸಂಗದಲ್ಲಿ 'ಪ್ರೀತಿ' ದ್ರೋಹವಾಗಿ ಪರಿವರ್ತಿತವಾಗುತ್ತದೆ. ಮಿತ್ರ ಪ್ರೀತಿ, ಕೈ ಹಿಡಿದವನ ಪ್ರೀತಿ, ಪ್ರೀತಿಯಾಗಿ ಮುಂದುವರೆಯದೆ ದ್ರೋಹಕ್ಕೆಳಸಿದ ಕಾರಣ ದುರಂತಕ್ಕೆ ಹಾದಿ ಮಾಡುತ್ತದೆ.

ಈ ದುರಂತ ರೂಪಕದ ಕರ್ತೃ ಯಾರೆಂಬುದು ನಿಚಿತವಲ್ಲದಿದ್ದರೂ ಉತ್ತರ- ಕರ್ನಾಟಕದ ಜಾನಪದ ರಂಗಭೂಮಿಯ ಮೇಲೆ ಅಪಾರ ಜನಪ್ರಿಯತೆಯನ್ನು ಗಳಿಸಿಕೊಂಡಿದೆ. ಬೈಲವಾಡದಲ್ಲಿ ನಡೆದ ನಿಜ ಘಟನೆಯನ್ನು ಆಧರಿಸಿ ಹುಟ್ಟಿಕೊಂಡ ಕತೆಯಾದರೂ, ಅಸಂಖ್ಯ ಪ್ರದರ್ಶನಗಳನ್ನು ಕಂಡು ಜನ ಮೆಚ್ಚಿಗೆ ಗಳಿಸಿದೆ.

ಇಡೀ ಕತೆ ಸಂಗ್ಯಾ-ಬಾಳ್ಯಾ, ಗಂಗಾರ ಸುತ್ತ ಪರಿಭ್ರಮಿಸುತ್ತದೆ. ಗಂಗಾ ಮದುವೆಯಾದ ಹೆಣ್ಣುಮಗಳು. ಆ ಕಾಲದ ಸಮಾಜ ನಿರೀಕ್ಷಿಸುವಂತೆ ಪತಿ ಪ್ರೀತಿ ನಿಷ್ಠಳೇ ! ಆದರೆ ಪರಿಸ್ಥಿತಿಗಳು ಅವಳನ್ನು ಹಾದರಕ್ಕೆ ಪ್ರಚೋದಿಸುತ್ತವೆ. ಸಂಗ್ಯಾ ಬಾಳ್ಯಾ ಬಹಳ ಆಪ್ತ ಗೆಳೆಯರು. ಬಹಳ ದಿನಗಳ ನಂತರ ಇಬ್ಬರೂ ಒಬ್ಬರನ್ನೊಬ್ಬರು ಹುಡುಕುತ್ತಾ ಬಂದು ಭೇಟಿಯಾಗುತ್ತಾರೆ. ಸಂಗ್ಯಾನ ಶ್ರೀಮಂತಿಕೆ, ದರ್ಪಗಳು ಸ್ನೇಹಕ್ಕೆ ಎಂದೂ ಅಡ್ಡಿ ಬಂದದ್ದಿಲ್ಲ. ಬಡವನಾಗಿರುವ ಬಾಳ್ಯಾನನ್ನು ಆತ್ಮೀಯತೆಯಿಂದ ಬರಮಾಡಿಕೊಂಡು ಬೇಡ ಬೇಡವೆಂದರೂ ಅವನಿಗೆ ಬಟ್ಟೆ ಬರೆ ಎಲ್ಲವನ್ನೂ ಕೊಡಿಸಿ ತನಗೆ ಸಮನಾಗಿ ಇರಿಸಿಕೊಂಡಿರುತ್ತಾನೆ. ಪಗಡೆಯಾಟಕ್ಕೆ ಸ್ಥಳವಾರಿಸುತ್ತಾ ಮಾಗಡಿ ಬಸಣ್ಣನ ಗುಡಿಗೆ ಬರುತ್ತಾರೆ. ಇಬ್ಬರೂ ಸೇರಿ ಪಗಡೆಯಾಟವನ್ನು ಬಹಳ ಹುರುಪಿನಿಂದ ಆಡುತ್ತಾರೆ. ಅದೇ ಸಮಯಕ್ಕೆ ಆ ಊರಿನ ಶ್ರೀಮಂತ ಲಗಳಿ ವೀರಣ್ಣನೆಂಬುವನು ವ್ಯಾಪಾರನಿಮಿತ್ತ ಊರು ಬಿಡಬೇಕಾಗಿ ಬರಲು ತನ್ನ ಅತ್ಯಂತ ಚೆಲುವೆಯಾದ ಹೆಂಡತಿ ಗಂಗೆಯನ್ನು ತನ್ನ ತಮ್ಮಂದಿರಾದ ವಿರೂಪಾಕ್ಷಿ, ಬಸವಂತರ ವೈಗಾವಲಿನಲ್ಲಿ ಬಿಟ್ಟು ಒಂಟಿತನದ ಬೇಸರ ಕಳೆಯಲೆಂದು ಮೇಲು ಮನೆ ಪರಮನನ್ನು ಜೊತೆಗಿರಿಸಿ, ಸೋಮವಾರ ಮಹದೇವರು

ಮರಡಿ ಬಸವಣ್ಣನ ಗುಡಿಗೆ ಹೋಗಿ ಕಾಯಿ ಕರ್ಪೂರ ಮಾಡಿಸಿಕೊಂಡು ಬರಲು ಆದೇಶಿಸುತ್ತಾನೆ. ತಾನೂ ವ್ಯಾಪಾರಕ್ಕೆಂದು ಹೋಗುತ್ತಿದ್ದರೂ ಕೊಡಲಿ, ಕುಡುಗೋಲುಗಳನ್ನು ತಂದುಕೊಡಲು ಹೇಳಿದಾಗ ಗಂಗೆಗೆ ಆಶ್ಚರ್ಯವಾಗುತ್ತದೆ. ಕಾರಣ ಕೇಳಲು ಕಳ್ಳಕಾಕರ ಭಯದ ನೆಪ ಹೇಳುತ್ತಾನೆ.

ಆಕಸ್ಮಿಕವೋ ಎಂಬಂತೆ ಪಗಡೆಯಾಡಲು ಬಂದಿದ್ದ ಸಂಗಣ್ಣ, ಬಾಳಣ್ಣರು, ಅದೇ ಗುಡಿಯಲ್ಲಿ ಪೂಜೆ ಮಾಡುತ್ತಿದ್ದ ಗಂಗೆಯನ್ನು ನೋಡಿದಾಗ, ಗಂಗಣ್ಣ ಅವಳ ಚೆಲುವಿಗ ಮಾರು ಹೋಗುತ್ತಾನೆ. ಹೇಗೋ ಉಪಾಯದಿಂದ ಅವಳ ಕೊರಳಲ್ಲಿನ ಸರಿಗೆಯನ್ನು ಬಿಚ್ಚಿಕೊಂಡು ತನ್ನಲ್ಲಿ ಇಟ್ಟು ಕೊಳ್ಳುತ್ತಾನೆ.

ತನ್ನ ಕೊರಳಲ್ಲಿನ ಸರಿಗೆ ಕಳೆದುಕೊಳ್ಳಲು ಅವಳಿಗೆ ತುಂಬಾ ಗಾಭರಿಯಾಗುತ್ತದೆ. ಒಂದೇ ಸಮನೆ ಅಳುತ್ತ, ಪರಿತಪಿಸುತ್ತಾ,

"ಏನು ಘಾತವಾದೀತ ! ಪರಮನಂದಾ
ಕೊರಳಾಗಿನ ಸರ ಹ್ವಾದೀತ"
"ಅಂತಿಂಥ ಸರಿಗ್ಯಲ್ಲ ! ಸೇರ ಬಂಗಾರ ಸರಿಗಿ
ಗಂಡ ಈರ್‍ಯಾನ ಮುಂದ ಏನಂತ ಹೇಳಲೆ ಪಂಟಾ "

ಎಂದು ಒಂದೇ ಸಮನೆ ಗೋಳಿಡುತ್ತಾ, ಗಂಡನು ಕೇಳಿದರೆ ಏನು ಮಾಡುವುದೆಂದು ಹೆದರುತ್ತಾಳೆ. ಸಾಲದ್ದಕ್ಕೆ ತಾನು ಒಂಟಿಯಾಗಿರುವ ಸಮಯ ನೋಡಿ ದಾರಿಗಡ್ಡ ಕಟ್ಟಿ ಅವಳನ್ನು ತನ್ನನ್ನು ಪ್ರೀತಿಸಲು ಹಿಂಸಿಸುತ್ತಾನೆ. ತನ್ನ ದಾರಿಗೆ ಅಡ್ಡಬರಬೇಡ ; ಹುಡುಗಾಟ ಬೇಡ ; ಕಾಡಬೇಡ; ತನ್ನ ಗಂಡ ವಿರೂಪಾಕ್ಷನೆಂದರೆ ತನಗೆ ಪ್ರಾಣ. ವಿಷಯ ತಿಳಿದರೆ ಕಡಿದು ಹಾಕುತ್ತಾರೆ' ಎಂದೆಲ್ಲ ಹೇಳಿ ಅವನಿಗೆ ಬುದ್ಧಿವಾದದ ಮಾತಾನಾಡಿದರೆ, ಸಂಗಣ್ಣ ಅದ್ಯಾವುದಕ್ಕೂ ಕಿವಿಗೊಡವೆ ಅವಳ ಪ್ರೀತಿಯಲ್ಲಿ ಹುಚ್ಚನಾಗಿ, ಅವಳದೇ ಚಿಂತೆಯಲ್ಲಿ ಮುಳುಗುವುದಲ್ಲದೆ, ಬಾಳಣ್ಣನನ್ನು, ಅವಳಿಗೆ ತಿಳಿಸಿಹೇಳಿ ಒಪ್ಪಿಸುವಂತೆ

ಒತ್ತಾಯ ಮಾಡುತ್ತಾನೆ. ಬಾಳಣ್ಣನಿಗೆ ಸಂಗಣ್ಣನ ಮೇಲೆ ಅತಿಯಾದ ಪ್ರೀತಿ. ಅವನು ತನಗೆ ಎಷ್ಟೆಲ್ಲ ಸಹಾಯ ಮಾಡಿದ್ದಾನೆ, ಇಂತಹ ಪರಿಸ್ಥಿತಿಯಲ್ಲಿ ತನ್ನ ಮುಂದೆ ದೈನ್ಯದಿಂದ ಒಂದು ಹೆಣ್ಣನ್ನು ಒಲಿಸಿಕೊಡುವಂತೆ ಬೇಡುತ್ತಿದ್ದಾನೆ. ಮಿತ್ರ ಪ್ರೀತಿಯ ದಾಕ್ಷಿಣ್ಯಕ್ಕೆ ಒಳಗಾಗಿ, ಗಂಗೆಯ ಮನೆಯ ವಿಳಾಸವನ್ನು ತಿಳಿದು ಬಂದು ಹೇಳುವುದೇ ಅಲ್ಲದೆ ಖುದ್ದಾಗಿ ತಾನೇ ಗಂಗೆಯ ಮನೆಗೆ ಹೋಗಿ ತನ್ನ ಪರಿಚಯ ಹೇಳಿಕೊಂಡು, ತನ್ನ ಗೆಳೆಯನ ವಿಚಾರವಾಗಿಯೂ ತಿಳಿಸುತ್ತಾನೆ. ವಿಷಯ ಹೇಳಲು ಅಂಜಿಕೆಯಾದರೂ ತನ್ನ ಜೀವದ ಗೆಳೆಯ ಅವನಾಗಿದ್ದಾನಾದ ಕಾರಣ, ಜಾತ್ರೆಯಲ್ಲಿ ಮೊನ್ನೆ ಅವಳನ್ನು ನೋಡಿ ಮನಸ್ಸು ಕೊಟ್ಟ ಕಾರಣ, ತನಗೆ ಅತ್ತಿಗೆಯಾಗಿ, ಸಂಗಣ್ಣನ ಮಡದಿಯಾಗಿ ಬರಬೇಕೆಂದು ಅಂಗಲಾಚಿ ಬೇಡಿಕೊಳ್ಳುತ್ತಾನೆ. ಗಂಗೆ ಸಾಮಾನ್ಯ ಹೆಣ್ಣಲ್ಲ. ಸಂಪ್ರದಾಯ, ಸಮಾಜ ಗೌರವಗಳ ಬಗ್ಗೆ ಚಿಂತಿಸುವವಳು. ತನ್ನನ್ನು ಅತಿಯಾಗಿ ಪ್ರೀತಿಸುವ ಗಂಡನಿರುವಾಗ, ತಾನು ವಿವಾಹಿತ ಹೆಣ್ಣಾಗಿರುವಾಗ ಇಂತಹ ಪ್ರಸ್ತಾಪವನ್ನು ತಂದ ಬಾಳಣ್ಣನನ್ನು ಹೀನಾಮಾನವಾಗಿ, ಬೈಯ್ಯುತ್ತಾಳೆ.

"ಯಾವ ತಾಯಿ ಹಡದಾಳೋ ಬಾಳ್ಯಾ ನಿನ್ನ !
ಮೀಸೆ ಹೊತ್ತ ಗಂಡನಾಗಿ ಮಾಡತಿ ಕುಂಟಲತಾನಾ !!"

"ಅಜ್ಜಾ ಮುತ್ಯಾ |ಅಜ್ಜ ಮುತ್ಯಾ ಕಲಿಸಿದರೇನೋಹಿಂತಾ ಬುದ್ಧಿ| ಕಲಿಸಿದರೇನೋ ಹಿಂತಾ ನಡತಿ"

ಎಂದು ಅವನ ಮುಖದ ನೀರಿಳಿಸುತ್ತಾಳೆ. ಅಲ್ಲದೆ ಅವನ ಕಿವಿ ಹಿಂಡಿ ಶಿಕ್ಷಿಸುತ್ತಾಳೆ.

ಹಿಂತಿರುಗಿದ ಬಾಳಣ್ಣ ಸಂಗಣ್ಣನಿಗೆ ಎಲ್ಲವನ್ನೂ ವಿವರಿಸಿ ತಿಳಿಸುತ್ತಾನೆ. ಗೆಳೆಯನ ಅಪಮಾನ ತನಗಾದ ಅಪಮಾನವೆಂದೇ ಭಾವಿಸಿ, ತಾನೇ ಅವಳ ಮನೆಗೆ ಹೋಗುತ್ತಾನೆ. ಅವಳನ್ನು ಪರಿಪರಿಯಾಗಿ ತನ್ನನ್ನು ಪ್ರೀತಿಸಲು ಬೇಡುತ್ತಾನೆ. ಅವಳನ್ನು ಬಂಗಾರದ ಹಾಗೆ ನೋಡಿಕೊಳ್ಳುವೆನೆಂದೂ, ಅವಳ ಪಾದದ ಬುಡಕ್ಕೆ ಜರಿ ಶಲ್ಲೆ ಹಾಸುವೆನೆಂದೂ, ಏನೇನೋ ಆಮಿಷಗಳನ್ನು ತೋರಿಸಿದರೂ ಗಂಗೆ

ಸೊಪ್ಪು ಹಾಕುವುದಿಲ್ಲ. ಮದುವೆಯಾದ ಹೆಣ್ಣು ಮಕ್ಕಳನ್ನು ಈ ರೀತಿ ಕಾಡುವುದು ಸರಿಯಲ್ಲವೆಂದು ಬೈದು ಹೋಗಲು ತಿಳಿಸುತ್ತಾಳೆ. ಅವಳು ನಿರಾಕರಿಸಿದಷ್ಟೂ ಇವನ ಜಿದ್ದು ಹೆಚ್ಚಾಗುತ್ತದೆ. ಏನಾದರಾಗಲೀ ಗಂಗೆಯನ್ನು ಬಿಡುವುದಿಲ್ಲವೆಂದೂ ಅವಳೇ ಬಂದು ತನ್ನ ಬಾಹುಗಳನ್ನು ಅಪ್ಪಿಕೊಳ್ಳೆಂದು, ಅದಿಲ್ಲದಿದ್ದಲ್ಲಿ ತಾನೇ ಮುನ್ನುಗ್ಗಿ ಹಿಡಿದು ಕೊಳ್ಳುವುದಾಗಿ ತಿಳಿಸಲು, ಹೆಣ್ಣನ್ನು ಬಲಾತ್ಕರಿಸಿ ಹಾಳಾದ ರಾವಣ, ದುಶ್ಯಾಸನರಂತೆ ಆಗುವುದು ಬೇಡವೆಂದು ಬುದ್ಧಿ ಹೇಳುತ್ತಾಳೆ. ಅಲ್ಲದೆ ತನ್ನನ್ನು ಹೀಗೆ ಪೀಡಿಸುತ್ತಿರುವುದನ್ನು ತನ್ನ ಮೈದುನಂದಿರು ನೋಡಿದರೆ ಕೊಚ್ಚಿ ಹಾಕಿ ಸಾಯಿಸುತ್ತಾರೆ. ಆದ್ದರಿಂದ ಅನ್ಯಾಯವಾಗಿ ಸಾಯುವುದು ಬೇಡವೆಂದು ಹಲವು ರೀತಿಯಲ್ಲಿ ಅವನಿಗೆ ಬುದ್ಧಿ ಕಲಿಸಲು ಯತ್ನಿಸಿದರೂ ಸಂಗಣ್ಣನದು ಒಂದೇ ಹಟ. ಗಂಗೆಯನ್ನು ಹೇಗಾದರೂ ಪಡೆಯುವಲ್ಲಿ ಅನೇಕ ಹುನ್ನಾರಗಳನ್ನು ಮಾಡುತ್ತಾನೆ. ಕೊರವತಿಯೊಬ್ಬಳ ಮಾತಿನಂತೆ, ಪರಮ್ಮನನ್ನು ತನ್ನ ದಾಳವಾಗಿ ಬಳಸಿಕೊಳ್ಳುತ್ತಾನೆ. ಪರಮ್ಮ ಸ್ವಾರ್ಥಿ, ಅತಿಯಾಸೆಯುಳ್ಳವಳು. ಸಂಗಣ್ಣ ಬಾಳಣ್ಣರಿಂದ ತನ್ನ ಕೆಲಸ ಏನೆಂದು ತಿಳಿದುಕೊಂಡು, ವಡವೆ, ವಸ್ತ್ರದ ಲಂಚದಾಸೆಗೆ ಬಿದ್ದು ನಂಬಿಕೆ ದ್ರೋಹಕ್ಕೆ ಸಿದ್ಧಳಾಗುತ್ತಾಳೆ.

ಪ್ರಸಾದ ಕೊಡುವ ನೆಪದಲ್ಲಿ ಗಂಗೆಯನ್ನು ಕಂಡು ಅವನ ಚೆಲುವು, ಪ್ರಾಯಗಳನ್ನು ಅತಿಯಾಗಿ ಬಣ್ಣಿಸಿ ಅವನನ್ನು ಒಲಿಯುವಂತೆ ಒತ್ತಾಯಿಸುತ್ತಾಳೆ. ಅತ್ತಿಮನಿ ಸೊಸೆಯಾದವಳನ್ನು, ವಿವಾಹವಾದವಳನ್ನು ಹೀಗೆಲ್ಲ ಕೇಳುವುದು ಸರಿಯಲ್ಲವೆಂದು ಹೇಳುತ್ತಾಳೆ. ಸೀರೆ, ಕುಪ್ಪಸ ಸರಿಗಿ ಆಮಿಷಗಳನ್ನು ಮುಂದಿರಿಸುತ್ತಾಳೆ. ಯಾವುದಕ್ಕೂ ಸೋಲದೆ ಹೋದಾಗ, ಅವಳದೇ ತಪ್ಪೆಂದು, ಅದನ್ನು ತಾನು ಮೈದುನರಿಗೆ, ಗಂಡನಿಗೆ ತಿಳಿಸುವುದಾಗಿ ಹೆದರಿಸುತ್ತಾಳೆ. "ಕಣ್ಣು ಚಿವುಟಿ ಸನ್ನೆ ಮಾಡಿ ಕರೆಯೋದನ್ನು ತಾನು ಕಂಡಿದ್ದೇನೆಂದು 'ಹೇಳಿ ಸುಳ್ಳು ಸುಳ್ಳೇ ಭಯ ಹುಟ್ಟಿಸಿದಾಗ ಗಂಗೆ ವಿಧಿಯಿಲ್ಲದೆ, ಅಸಹಾಯಕಳಾಗಿ ಒಪ್ಪಿಕೊಳ್ಳುತ್ತಾಳೆ. ಪತಿ ದ್ರೋಹ ಮಾಡುವ ಎಳ್ಳಷ್ಟು ಮನಸು ಇಲ್ಲದಿದ್ದರೂ ಒಂದು ಕಡೆ ಭಯ, ಮತ್ತೊಂದು ಕಡೆ ತನಗರಿವಿಲ್ಲದೇ ತನ್ನನ್ನು ಆಕರ್ಷಿಸಿದ ಸಂಗಣ್ಣನ ಚೆಲುವು ಅವಳನ್ನು ಹಾದಿ ತಪ್ಪಿಸುತ್ತದೆ. ಮೂರು ಸಂಜೆಗೆ, ದನಕರು

ಮನೆ ಸೇರುವ ಸಮಯಕ್ಕೆ ಅವನನ್ನು ಬರುವಂತೆ ಹೇಳೆಂದು ತಿಳಿಸುತ್ತಾಳೆ.

ಅಷ್ಟರಲ್ಲಿ, ಗಂಗೆಗಾಗಿ ಪರಿತಪಿಸಿದ ಸಂಗಣ್ಣನಲ್ಲಿ ವಿವೇ ಜಾಗೃತವಾಗಿ, ತಾನು ಮಾಡುತ್ತಿರುವುದು ತಪ್ಪೆಂದು ತಿಳಿದು ಸುಮ್ಮನಾದ ಬಾಳಣ್ಣ ಮತ್ತು ಪರಮ್ಮರ ಒತ್ತಾಯದಿಂದ ಗಂಗೆಯನ್ನು ಕಾಣಲ ಹೋಗುತ್ತಾನೆ. ಗಂಗೆ ಮೊದ ಮೊದಲು ವಿರೋಧ ತೋರಿದರೂ ಅನೀತಿಯೆಂದು ಭಾವಿಸಿದರೂ, ಸಂಗಣ್ಣನನ್ನು ಕರೆಸಿಕೊಂಡ ಮೇಲ ಅದೆಲ್ಲವನ್ನೂ ಮರೆತು ಅವನಿಗೆ ಮೋಹಿತಳಾಗಿ ಅವನನ್ನು ವಿಧ ವಿಧವಾಗ ಸತ್ಕರಿಸಿ, ರಮಿಸುತ್ತಾಳೆ. ವಿಲಾಸ ಮಾಡಲು ರಂಗ ಮಂಚಕ್ಕ ಆಹ್ವಾನಿಸುತ್ತಾಳೆ. ಮನಃ ಪೂರ್ತಿಯಾಗಿ ತನ್ನನ್ನು ಅವನಿಗ ಒಪ್ಪಿಸಿಕೊಳ್ಳುತ್ತಾಳೆ. ಗಂಗೆ ಮತ್ತು ಸಂಗಣ್ಣರ ಚೈನಿ ನಿರಂತರವಾಗ ಮುಂದುವರೆಯುತ್ತದೆ.

ಬಾಳಣ್ಣನಿಗೆ ಈಗೀಗ ದುರಂತದ ವಾಸನೆ ಹತ್ತಲು ಆರಂಭವಾಗುತ್ತದೆ. ಅತ್ತಕಡೆ ವ್ಯಾಪಾರಕ್ಕೆ ಹೋಗಿದ್ದ ವೀರಣ್ಣನಿಗೆ ಅನಿಷ್ಟ ಕನಸುಗಳು ಬಿದ್ದ ಕಾರಣ ವ್ಯಾಪಾರವನ್ನು ಅರ್ಧದಲ್ಲಿಯೇ ಬಿಟ್ಟು ಬರುತ್ತಾನೆ. ಮನೆಗೆ ಬಂದು ನಿಲ್ಲುತ್ತಿದ್ದಂತೆ ಹಾಡಹಗಲೇ ಬಾಗಿಲು ಹಾಕಿದ್ದನ್ನು ಕಂಡು, ಇಷ್ಟು ಹೊತ್ತು ಬಾಗಿಲು ಬಡಿದರೂ ಬಾಗಿಲು ತೆಗೆಯದಿದ್ದುದು ಅವನಿಗೆ ಆಶ್ಚರ್ಯ, ಅನುಮಾನಗಳನ್ನು ಮೂಡಿಸುತ್ತದೆ. ಗಂಗೆ ಏನು ಮಾಡುತ್ತಿರಬಹುದೆಂದು ಊಹಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಬರುವಾಗಲೇ ಗಂಗೆ ಮತ್ತು ಸಂಗಣ್ಣರ ಸಂಬಂಧದ ಸುದ್ದಿ ಕಿವಿ ಮೇಲೆ ಬಿದ್ದುದು ನೆನಪಾಗಿ, ಅವನು ಹೊರಗೆ ಬರಲಿ ಚೂರು ಚೂರು ಮಾಡಿ ಬಿಡುತ್ತೇನೆ, ಇಲ್ಲಿಯೇ ಬಾಗಿಲಲ್ಲಿ ಅವನಿಗಾಗಿ ಕಾಯುತ್ತೇನೆಂದು ಕೊಳ್ಳುತ್ತಾನೆ.

ಗಂಡ ಬಂದಿರುವ ಸುಳಿವು ತಿಳಿದು, ಗಂಗೆ ಸಂಗಣ್ಣನನ್ನು ಗಂಡನಿಂದ ಪಾರು ಮಾಡಲು ಪ್ರಯತ್ನಿಸುತ್ತಾಳೆ. ಬಚ್ಚಲಲ್ಲಿ, ಕಪ್ಪು ಕತ್ತಲಲ್ಲಿ, ಚಾಪೆಯ ಸುರುಳಿಯಲ್ಲಿ ಮುಚ್ಚಿಡುವುದಾಗಿ ಅವನಿಗೆ ಧೈರ್ಯ ತುಂಬುತ್ತಾಳೆ. ಆದರೆ ಅವನು ತಪ್ಪಿಸಿಕೊಳ್ಳುವ ಅವಾಂತರದಲ್ಲಿ ಸಂಗಣ್ಣನ ರುಮಾಲು ಬಿದ್ದು ಹೋಗಿರುತ್ತದೆ. ಗಂಗೆಯ ಗಂಡನ ಕಣ್ಣಿಗೆ ಅದು ಬಿದ್ದುದೇ, ಕೂಡಲೇ ಅದು ಸಂಗಣ್ಣನದೆಂದು ಗುರುತಿಸುತ್ತಾನೆ. ಗಂಗೆ

ತನಗೇನೂ ತಿಳಿಯದೆಂದೂ, ಇದರಲ್ಲಿ ತನ್ನದೇನೂ ತಪ್ಪಿಲ್ಲವೆಂದೂ ಹೇಳಿಕೊಳ್ಳುತ್ತಾಳೆ. ಆದರೆ ವೀರಣ್ಣನಿಗೆ ಗೊತ್ತು. ಹಿರಿಯರು ಮನೆಯಲ್ಲಿ ಇಲ್ಲದಿರುವಾಗ ಹೆಂಡತಿ ರಂಡೆಯಾಗಿ ವರ್ತಿಸಿದ್ದಾಳೆ. ಹಾಗೆ ಮಾಡಲು ಅವಳಿಗೆ ತನ್ನಿಂದ ಏನು ಕಡಿಮೆಯಾಗಿದೆ. ಎಂದು ಯೋಚಿಸುತ್ತಾನೆ. ಬೇಕಾದ್ದನ್ನು ತಿನ್ನಿಸಿ, ಗಿಳಿಹಂಗ ಸಾಕಿದರೂ ಪರಪುರುಷನ ಸಂಗ ಮಾಡಿ ಮರ್ಯಾದೆ ಕಳೆದಳಲ್ಲಾ ಎನ್ನುವ ಚಿಂತೆ. ಅದನ್ನೇ ಅವಳಿಗೆ ಹೇಳುತ್ತಾನೆ. ಆದರೆ ಗಂಗೆ ತನ್ನ ಮೇಲೆ ಹಾದರದ ಸುಳ್ಳು ಅಪವಾದನೆ ಸಲ್ಲದೆಂದು ತಿಳಿಸುತ್ತಾಳೆ. ಗಂಗೆಯನ್ನು ಕಡಿದು ಬಿಡುವಷ್ಟು ಸಿಟ್ಟು ಬರುತ್ತದೆ. ಆದರೆ ತಮ್ಮಂದಿರಾದ ವಿರೂಪಾಕ್ಷ ಬಸಂತರು ಸ್ತ್ರೀಹತ್ಯೆ ಪಾಪವೆಂದೂ, ಶಿಕ್ಷೆ ಕೊಡುವುದಾದರೆ ಅವಳಿಂದ ಎಲ್ಲ ವಸ್ತ್ರ ,ಒಡವೆ ಕಸಿದುಕೊಂಡು ತವರಿಗೆ ಕಳಿಸಿಬಿಡೆಂದೂ ವಿವೇಕ ಹೇಳುತ್ತಾರೆ. ಗಂಗೆ ತಾನು ನಿರಪರಾಧಿ ಎಂದು ಎಷ್ಟೇ ತಿಳಿಸಿ ಹೇಳಲು ಪ್ರಯತ್ನಿಸಿದರೂ ಮೈದುನರಾಗಲಿ, ಗಂಡನಾಗಲೀ ನಂಬುವುದಿಲ್ಲ. ವಿಧಿಯಿಲ್ಲದೆ ಗಂಗೆ ಮನೆ ಬಿಟ್ಟು, ಎಲ್ಲವನ್ನೂ ಕಳೆದುಕೊಂಡು ದೈನ್ಯ ಸ್ಥಿತಿಯಲ್ಲಿ ಬಾಳಣ್ಣನ ಮುಂದೆ ಬಂದು ತನ್ನ ಗೋಳು ಹೇಳಿಕೊಳ್ಳುತ್ತಾಳೆ. ತನ್ನ ಒಗೆತನವನ್ನು ಹಾಳು ಮಾಡಿದ್ದಕ್ಕಾಗಿ ಅವನನ್ನು ಶಪಿಸುತ್ತಾಳೆ. ನಂತರ ಬಾಳಣ್ಣನನ್ನು ಜೊತೆ ಮಾಡಿಕೊಂಡು ತವರು ಸೇರುತ್ತಾಳೆ.

ಈರಣ್ಣ ಸೇಡಿಗಾಗಿ, ಪ್ರತೀಕಾರಕ್ಕಾಗಿ ಹೊಂಚು ಹಾಕುತ್ತಾನೆ. ಸಂಗಣ್ಣನನ್ನು ಹಿಡಿಯಲು ಅವನ ಆಪ್ತಮಿತ್ರನಾದ ಬಾಳಣ್ಣನೇ ಸರಿಯೆಂದು ತಿಳಿದು, ತನಗೆ ಜಡ್ಡಾಗಿದೆಯೆಂದು ಹೇಳಿ ಬಾಳಣ್ಣನನ್ನು ಮನೆಗೆ ಕರೆಸಿಕೊಂಡು, ಸಂಗಣ್ಣನನ್ನು ಹಿಡಿದುಕೊಡಲು ಕೇಳುತ್ತಾನೆ. ಬಾಳಣ್ಣ ಮೊದಲು ಮಿತ್ರ ದ್ರೋಹ ಮಾಡಲು ಒಪ್ಪುವುದಿಲ್ಲ. ಆದರೆ ಅವನ ಪ್ರಾಣದ ಮೇಲೆ ಬೆದರಿಕೆ ಹಾಕಿದಾಗ, ಗೆಳೆಯನ ಪ್ರಾಣಕ್ಕಿಂತ ತನ್ನ ಪ್ರಾಣ ಹೆಚ್ಚೆನಿಸಿ, ಗೆಳೆಯನಿಗೆ ದ್ರೋಹ ಬಗೆಯಲು ನಿಶ್ಚಯಿಸುತ್ತಾನೆ. ತಾನೇ ಸಂಗಣ್ಣನನ್ನು ಕರೆದು ತರುವೆನೆಂದೂ, ನಿಶ್ಚಿತ ಸಮಯ ಮತ್ತು ಸ್ಥಳವನ್ನು ತಿಳಿಸಿ ಅವರನ್ನು ಕೊಡಲಿ ಕುಡುಗೋಲುಗಳೊಂದಿಗೆ ಸಜ್ಜಾಗಿ ಬರುವಂತೆ ತಿಳಿಸುತ್ತಾನೆ. ಪ್ರಾಣದ ಮೇಲಿನ ಆಸೆಯ ಜೊತೆಗೆ ಅವರು ಬಹುಮಾನವಾಗಿ ಕೊಡುವ ಸಂಪತ್ತು ಅವನನ್ನು ಪೂರ್ತಿ ಮರುಳು ಮಾಡಿಬಿಡುತ್ತದೆ. ಸಂಗಣ್ಣನ ಪ್ರಾಣಕ್ಕೆ ಸಂಚಕಾರವಿದೆಯೆಂಬ ಸುದ್ದಿಯನ್ನು

ತಿಳಿಸಿ ಎಚ್ಚರಿಸಲು ಬರೆದ ಗಂಗೆಯ ಪತ್ರ ಬಾಳಣ್ಣನ ಕೈ ಸೇರುತ್ತದೆ. ಪತ್ರ ತಂದವನನ್ನು ತಾನೇ ಸಂಗಣ್ಣನೆಂದು ನಂಬಿಸಿ ಪತ್ರ ಪಡೆದಿದ್ದ ಕಾರಣ ಸಂಗಣ್ಣನಿಗೆ ವಿಷಯವೇನೆಂದೇ ತಿಳಿದಿರುವುದಿಲ್ಲ. ಬಾಳಣ್ಣ ಸಂಗಣ್ಣನನ್ನು ಗಂಗೆ ನಾಗರಪಂಚಮಿ ಹಬ್ಬವಾದ್ದರಿಂದ ಜೋಕಾಲಿ ಆಡಲು ಕರೆಯುತ್ತಿದ್ದಂತೆ, ಒಂದು ಪತ್ರ ಸೃಷ್ಟಿಸಿ ಅವನಿಗೆ ನೀಡುತ್ತಾನೆ. ಗಂಗೆಯದೆಂದು ಕೊಟ್ಟ ಪತ್ರ. ಆಪ್ತ ಮಿತ್ರ ಬಾಳಣ್ಣನ ಪ್ರಚೋದನೆಗಳು, ತನಗೆ ಬಿದ್ದ ದುಃಸ್ವಪ್ನಗಳ ಭೀತಿಯನ್ನೂ ಮೆಟ್ಟಿ ನಿಲ್ಲುತ್ತವೆ. ಮುಂದೆ ಒದಗಲಿರುವ ಪರಿಸ್ಥಿತಿಯ ಕಲ್ಪನೆಯೂ ಇಲ್ಲದೆ, ಗೆಳೆಯನ ಮಿತ್ರದ್ರೋಹದ ಸುಳಿವೂ ಸಿಗದೆ ಮುಗ್ಧನಾಗಿ ಗೆಳೆಯನನ್ನು ಓಂಬಾಲಿಸಿ ಹೋಗಿ ವೀರಣ್ಣ, ವಿರೂಪಾಕ್ಷ, ಬಸಂತ ಸೋದರರ ಅನಿರೀಕ್ಷಿತ ಹಲ್ಲೆಗೆ ಒಳಗಾಗಿ, ಸಂಗಣ್ಣ ದಾರುಣ ದುರಂತಕ್ಕೆ ಒಳಗಾಗುತ್ತಾನೆ.

ಈ ಪ್ರಸಂಗದಲ್ಲಿ ಏಕಕಾಲದಲ್ಲಿ ಮಿತ್ರ ದ್ರೋಹ ಪತಿ ದ್ರೋಹ ಎರಡನ್ನೂ ಕಾಣಬಹುದಾಗಿದೆ. ದ್ರೋಹಕ್ಕೆ ಯಾವುದೇ ಪ್ರಬಲವಾದ ಕಾರಣವಿಲ್ಲ; ಸ್ವಾರ್ಥವೂ ಇಲ್ಲ. ಆದರೂ ಎಷ್ಟೊಂದು ಗಾಢವಾಗಿ ಪ್ರೀತಿಸುವವರೂ ಪ್ರೀತಿಸುವವರನ್ನು ಇಂತಹ ದುರಂತಕ್ಕೆ ಒಳಗಾಗಿಸಬೇಕಾದರೆ, ದ್ರೋಹ ಮಾಡಬೇಕಾದರೆ, ಅವರ ಪ್ರೀತಿಯ ನೈತಿಕತೆಯನ್ನು ಪ್ರಶ್ನಿಸುವಂತಾಗುತ್ತದೆ. ತಾನು ಹಾನಿಗೆ ಒಳಗಾದರೂ ಪ್ರೀತಿಸಿದವರನ್ನು, ಪ್ರೀತಿಸಿದ್ದನ್ನು ಉಳಿಸುವುದು ಪ್ರೀತಿಯ ಅಂತರ್ಗತವಾದ 'ತ್ಯಾಗವೆನಿಸಿದರೆ, ತಾನು ಉಳಿದುಕೊಂಡು ತನ್ನನ್ನು ಪ್ರೀತಿಸಿದವರನ್ನು ಯಾವುದೇ ಪಾಪ ಪ್ರಜ್ಞೆಯಿಲ್ಲದೆ, ಮಾನಸಿಕ ಒಳತೋಟಿಯಿಲ್ಲದೆ ದುರಂತಕ್ಕೆ, ವಿನಾಶಕ್ಕೆ ತಳ್ಳುವುದು ದ್ರೋಹ, ವಂಚನೆ, ಸ್ವಾರ್ಥವೆನಿಸಿ ಕೊಳ್ಳುತ್ತದೆ. ಅಲ್ಲದೆ ಇದು ಪ್ರೀತಿಯ ಸಕಾರಾತ್ಮಕ, ನಿಷೇಧಾತ್ಮಕ ಅಥವಾ ಋಣಾತ್ಮಕ ಮೌಲ್ಯವೆನಿಸಿ ಕೊಳ್ಳುತ್ತದೆ. ಜಗತ್ತಿನಲ್ಲಿ ಶುದ್ಧ ಪ್ರೀತಿ, ನಿರ್ಮಲ, ನಿಸ್ವಾರ್ಥ, ತ್ಯಾಗ, ಔದಾರ್ಯ ಪ್ರೇರಿತವಾದ ಪ್ರೀತಿಯಿರಲು ಸಾಧ್ಯವೇ ಎಂದು ಪದೇ ಪದೇ ಯೋಚಿಸುವ ಅನಿವಾರ್ಯತೆ ನಮ್ಮದಾಗುತ್ತದೆ.

★ ★ ★

## ಸೆಲೆ - ೧೭

# ಸಾವಿರ ವರಹ ಕೊಟ್ಟರು ಸಿಗಲಾರದ ಸತಿ ನೀನು

ಪ್ರೀತಿ ತ್ಯಾಗಗಳ ಸಂಬಂಧ ಅನನ್ಯವಾದುದು. ಪ್ರೀತಿಗೆ ಇರುವ ಹಲವು ಮುಖಗಳಲ್ಲಿ ತ್ಯಾಗವು ಮಹೋನ್ನತವಾದುದು. ನಂಬಿದ ಮೌಲ್ಯಕ್ಕಾಗಿ, ಪ್ರೀತಿಸುವ ಆದರ್ಶಗಳಿಗಾಗಿ, ರಾಷ್ಟ್ರಕ್ಕಾಗಿ, ವ್ಯಕ್ತಿಗಳಿಗಾಗಿ ಮಾಡುವ ತ್ಯಾಗ ಬಲಿದಾನಗಳಿಗೆ ನಮ್ಮ ಕಾವ್ಯ, ಕಥಾ ಪರಂಪರೆಯಲ್ಲಿ ಹಲವಾರು ನಿದರ್ಶನಗಳಿವೆ. ಗಂಡು-ಹೆಣ್ಣಿನ ಪ್ರೀತಿಯು ಗಾಢತೆ. ಅನನ್ಯತೆಗಳ ವಿಷಯಕ್ಕೆ ಬಂದಾಗ ಸಾಮಾನ್ಯವಾಗಿ ತ್ಯಾಗ, ಬಲಿದಾನ, ಆತ್ಮಾರ್ಪಣೆಗಳು ಹೆಚ್ಚಾಗಿ ಹೆಣ್ಣುಗಳಿಂದಲೇ ! ಆದರೆ ಅಪರೂಪಕ್ಕೆ ತಾನು ತನ್ನ ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸುವ ಹೆಂಡತಿ, ಕಾರಣಾಂತರಗಳಿಂದ ಅಗಲಿದರೆ, ಸಾವನ್ನಪ್ಪಿದರೆ, ಅವಳ ಅಗಲಿಕೆ, ವಿರಹ ತೀವ್ರತೆಗಳನ್ನು ಭರಿಸಲಾಗದೆ ಅಸಹಾಯಕತೆಯಿಂದ ತಾವೂ ಸಾವನ್ನಪ್ಪಿ ಬದುಕಿಗೆ ವಿದಾಯ ಹೇಳಿಕೊಳ್ಳುವಂತಹ ಪುರುಷ ಸಮುದಾಯವೂ ಅಪರೂಪಕ್ಕೆ ಕಾಣಸಿಗುತ್ತದೆ. ಅಂತಹ ಪುರುಷ ಸಮುದಾಯಕ್ಕೆ ಸೇರಿದ ವ್ಯಕ್ತಿಯೇ ನಮ್ಮ ಜನಪದ ಕಾವ್ಯದ ಶ್ರೀಮಂತ ಪರಂಪರೆಯಲ್ಲಿ ಎದ್ದು ಕಾಣುವಂತಹ, ಮತ್ತು ಸಮಕಾಲೀನ ಸಾಹಿತ್ಯ ಚಿಂತಕರ, ವಿಮರ್ಶಕರ ಗಮನ ಸೆಳೆದಿರುವ 'ಕಥನ ಕಾವ್ಯ' (ಖಂಡಕಾವ್ಯ )ವಾದ 'ಕೆರೆಗೆ ಹಾರ'. ಅಂಧ ವಿಶ್ವಾಸ, ಅರ್ಥವಿಲ್ಲದ ಆಚರಣೆಯ ಪರಿಣಾಮದ ಕ್ರೂರ ದುರಂತವನ್ನು ಬಿಂಬಿಸುವ ಈ ಕಥಾನಕದ ವ್ಯಾಪ್ತಿಯೊಳಗೇ ಕಾಣಿಸಿಕೊಳ್ಳುವ 'ಮಾದೇವರಾಯನ' 'ಸತಿಪ್ರೇಮದ' ಅನನ್ಯತೆಯೂ ಅತ್ಯಂತ ಮಹತ್ವದ ಅಂಶವಾಗಿ ಕಾಣಿಸಿಕೊಳ್ಳುತ್ತದೆ.

ಗಂಡನ ಸಾವಿನೊಂದಿಗೆ, ಹತಾಶ ಸ್ಥಿತಿಯಲ್ಲಿ, ಬೇರೆ ಬೇರೆ ಕಾರಣಗಳಿಂದಾಗಿ, ಪತಿಯೊಡನೆ ಸಹಗಮನ ಮಾಡುವುದು ಸರ್ವೇ ಸಾಮಾನ್ಯ ವಿಷಯವೇ ! ಆದರೆ ಸತಿಯ ಸಾವಿನೊಂದಿಗೆ, ತಾನೂ ಸಾವನ್ನಪ್ಪುವ, ವಿಚಿತ್ರ ಮತ್ತು ಅಪರೂಪದ ಜನಪದ ಕತೆಯೇ 'ಕೆರೆಗೆ

ಹಾರ' ಇಡೀ ಕನ್ನಡ ಸಾಹಿತ್ಯ ಪರಂಪರೆಯಲ್ಲಿಯೇ ಈ ಕಥಾನಕ ಅತ್ಯಂತ ಮಹತ್ವದ್ದೂ ಮತ್ತು ಅಪರೂಪದ್ದೂ ಆಗಿ ಮೇಲಿಂದ ಮೇಲೆ ಚರ್ಚೆಗೆ ಒಳಗಾಗಿದೆ.

ಸಾಮಾನ್ಯವಾಗಿ ಹಳ್ಳಿಗಳಲ್ಲಿ ದೇವರು, ಧರ್ಮ, ಶಕುನ ಮುಂತಾದವುಗಳಲ್ಲಿ ಹೆಚ್ಚಿನ ನಂಬಿಕೆ. ತಮ್ಮೆಲ್ಲ ಸಮಸ್ಯೆಗಳಿಗೆ, ಕಷ್ಟ ಪರಂಪರೆಗಳಿಗೆ ದೇವರು, ದಿಂಡರೇ ಕಾರಣವೆಂದು ನಂಬಿ ಅವುಗಳನ್ನು ತಣಿಸಲು ಸಂಪ್ರೀತಗೊಳಿಸಲು, ಅವುಗಳ ಕೋಪ ತಾಪಗಳನ್ನು ನಿವಾರಿಸಲು ಪೂಜೆ, ಬಲಿ ಇತ್ಯಾದಿ ಆಚರಣೆಗಳ ಮೊರೆ ಹೋಗುತ್ತಾರೆ. ಇಂತಹ ಪ್ರಕ್ರಿಯೆಯಲ್ಲಿ ಮುಗ್ಧ ಜೀವಿಗಳು, ಮನುಷ್ಯರು ಬಲಿ ಪಶುಗಳಾಗುತ್ತಾರೆ. 'ಕೆರೆಗೆ ಹಾರ' ಕಥನದಲ್ಲಿ ಬರುವ 'ಭಾಗೀರಥಿ' ಹೀಗೆ ಬಲಿಪಶುಗಳಾಗುವವರಲ್ಲಿ ಒಬ್ಬಳು.

ಕನಕೇರಿ ಎಂಬ ಊರಿನಲ್ಲಿ ಮಲ್ಲನಗೌಡನೆಂಬ ವ್ಯಕ್ತಿಯೊಬ್ಬ ಕೆರೆ ಕಟ್ಟಿಸುತ್ತಾನೆ. ಆದರೆ ಎಷ್ಟು ಆಳಕ್ಕೆ ಹೋದರೂ ಒಂದು ಬೊಗಸೆ ನೀರೂ ಬಾರದಿರಲು, ಕಾರಣ ತಿಳಿಯಲು ಜೋತಿಷ್ಯದ ಮೊರೆ ಹೋಗುತ್ತಾನೆ. ನೀರು ಬಾರದಿರಲು ದೇವ್ರು, ದಿಂಡ್ರು, ದೆವ್ವ, ಭೂತ ಯಾವುದೂ ಕಾರಣವಲ್ಲ. ಹಿರಿ ಸೊಸೆಯ ಬಲಿಯ ಮೂಲಕ ಪರಿಹಾರ ಸಾಧ್ಯವಾಗುತ್ತದೆನ್ನುವುದು ಜೋಯಿಸರ ಸಲಹೆ. ಆದರೆ ಯಾವುದೇ ಮನೆತನದಲ್ಲಿ ಹಿರಿಸೊಸೆಗೆ ಹೆಚ್ಚಿನ ಗೌರವ ಪ್ರತಿಷ್ಠೆ, ಅಧಿಕಾರ. ಆಕೆಯೇ ವಂಶೋದ್ಧಾರಕನನ್ನು ಕೊಡಬಲ್ಲವಳು. ಅವಳಿಂದಾಗುವ ಗಂಡು ಮಗುವೆ ವಂಶೋದ್ಧಾರಕ, ಕುಲದೀಪಕ. ಹಾಗಾಗಿ ಹಿರಿ ಸೊಸೆ ಹಿರಿತನಕ್ಕೆ ಇರಲೇ ಬೇಕು. ಆದ್ದರಿಂದ ಬಲಿ ಕೊಡುವುದಾದರೆ ಕಿರಿಸೊಸೆ ಭಾಗೀರಥಿಯನ್ನೇ !! ಅವಳೇ 'ಬಲಿ' ಗೆ ಆಯ್ಕೆಯಾಗುತ್ತಾಳೆ. ಅತ್ತೆ, ಮಾವಂದಿರು, ಹಿರಿಯರು ನಿರ್ಧಾರ ಮಾಡಿರುವಾಗ ಪ್ರಶ್ನಿಸುವ, ನಿರಾಕರಿಸುವ ಹಕ್ಕು ಸೊಸೆಗೆಲ್ಲಿಯದು ? ಒಂದು ವೇಳೆ ಭಾಗೀರಥಿಯ ಪ್ರಾಣಕಾಂತ, ಗಂಡ ಮಾದೇವರಾಯ 'ಮನೆಯಲ್ಲಿ ಇದ್ದಿದ್ದರೆ ಕತೆಯೇ ಬೇರೆಯಾಗುತ್ತಿತ್ತು. ಹೆಂಡತಿಯನ್ನು ಅಪಾರವಾಗಿ ಪ್ರೀತಿಸುವ ಅವನು ಖಂಡಿತವಾಗಿಯೂ ಇದಕ್ಕೆ ಒಪ್ಪುತ್ತಿರಲಿಲ್ಲ. ಹಿರಿಯರ ಮಾತಿಗೆ ವಿಧೇಯರಾಗಿ ಇರಬೇಕೆಂಬ

ಸಾಮಾಜಿಕ ಕಾಲ ಘಟ್ಟದಲ್ಲಿ ಇರುತ್ತಿದ್ದರೂ, ಹೆಂಡತಿಯ ರೂಪದಲ್ಲಿದ್ದ ತನ್ನ ಪ್ರೀತಿ ಹೀಗೆ ಅಮಾನುಷವಾಗಿ ಕೊಲೆಯಾಗುವುದನ್ನು ಪುರಸ್ಕರಿಸುತ್ತಿರಲಿಲ್ಲ. ಅಥವಾ ಅನಿವಾರ್ಯವಾದರೆ ಇಬ್ಬರೂ ಒಟ್ಟಿಗೆ 'ಸಹಗಮನ' ಮಾಡುತ್ತಿದ್ದರು. ತಂದೆ ತಾಯಿಗಳಿಗೂ ಸೊಸೆಯನ್ನು ಬಲಿಕೊಡುವ ನಿರ್ಧಾರದ ಸಂದರ್ಭದಲ್ಲಿ, ಮಗನನ್ನು ಕೇಳಬೇಕೆಂದಾಗಲೀ, ಬರುವವರೆಗೆ ಕಾಯಬೇಕೆಂದಾಗಲೀ ಅನಿಸಲಿಲ್ಲ. ಸಲೀಸಾಗಿ ಯಾವುದೇ ತಲ್ಲಣ, ತಳಮಳಗಳಿಲ್ಲದೆ ತೀರ್ಮಾನಿಸಿ ಬಿಟ್ಟರು. ಹೋಗಲಿ ಭಾಗೀರಥಿಯನ್ನಾಗಲೀ ಒಂದು ಮಾತು ಕೇಳಬೇಕೆಂದನಿಸಲಿಲ್ಲ. ಅವರ ನಿರ್ಧಾರ, ತೀರ್ಮಾನಗಳು ಕಿವಿಗೆ ಬಿದ್ದು ಮಾನಸಿಕವಾಗಿ ಸಿದ್ಧಗೊಳ್ಳಬೇಕಾಗುತ್ತದೆ. ತನ್ನ ಬಲಿಯ ಬಗ್ಗೆ ಮನೆಯಲ್ಲಿ ಮಾತುಕತೆ ನಡೆದದ್ದನ್ನು ಕೇಳಿಸಿಕೊಂಡವಳು ಕಡೆಯ ಸಲವಾಗಿ ತವರನ್ನು ಕಾಣಲು ಹೋಗುತ್ತಾಳೆ. ಅಂದಿನ ಆ ಜನಪದ ಸಮಾಜದಲ್ಲಿ ಹೆಣ್ಣು ಮಕ್ಕಳು ವಿನಯ ವಿಧೇಯತೆಗಳ ಜೊತೆಗೆ ಅತ್ತೆ ಮನೆಯ ಗುಟ್ಟುಗಳನ್ನು ರಕ್ಷಿಸುವುದನ್ನು ರೂಢಿಸಿಕೊಳ್ಳಬೇಕಾಗಿತ್ತು. ತವರಿಗೆ ಹೋಗಲು ಅತ್ತೆಯಿಂದ ಅನುಮತಿಯನ್ನು ಪಡೆದು ಹೋದವಳು ತಂದೆ, ತಾಯಿ, ಅಕ್ಕ, ಗೆಳತಿ ಎಲ್ಲರನ್ನೂ ಭೇಟಿಯಾಗುತ್ತಾಳೆ. ದುಗುಡದಿಂದ ಕೂಡಿದ ಮುಖ ; ದುಮ್ಮಿಕ್ಕಲು ನಿಂತ ಕಂಬನಿ ; ಇದ್ದಕ್ಕಿದ್ದಂತೆ ಬಂದ ಮಗಳು; ಬೇಸರದ ಮುಖ. ಅವರಿಗೆ ಆಶ್ಚರ್ಯವೋ ಆಶ್ಚರ್ಯ !! ಪ್ರೀತಿ ವಿಶ್ವಾಸದಿಂದ ಅವರೆಲ್ಲರೂ ಕೇಳಿದ ಪ್ರಶ್ನೆ ಒಂದೇ ! "ಎಂದಿಲ್ಲದ ಭಾಗೀರಥಿ ಇಂದ್ಯಾಕ ಬಂದೆವ್ವ , ಬಾಡಿದ ಮಾರ್‍ಯಾಕ ? ಕಣ್ಣಾಗ ನೀರ್‍ಯಾಕ ?" ಎಂದು ಎಲ್ಲರೂ ಕೇಳಿದ ಈ ಪ್ರಶ್ನೆಗೆ ಅವಳು ಕೊಟ್ಟ ಉತ್ತರವೂ ಒಂದೇ. ಜಾಣ್ಮೆಯಿಂದ ಮತ್ತು ಸೂಚ್ಯವಾಗಿ, "ನಮ್ಮತ್ತೆ ನಮ್ಮಾವ ಬ್ಯಾರೆ ಇಡುತಾರಂತೆ" - ಎಂದಷ್ಟೇ ಹೇಳುತ್ತಾಳೆ .ಅವಳ ನಿಜವಾದ ಸಮಸ್ಯೆ ಏನೆಂದು ತಿಳಿಯದ ತಂದೆ, ತಾಯಿ, ಅಕ್ಕ. "ಇಟ್ಟರೆ ಇಡಲೇಳು ಹೊಲಮನಿ ಕೊಡ್ತೇನೆ ; ವಾಲೆ ಜೋಡು ಕೊಡ್ತೇನೆ ; ಮಕ್ಕಳ ಜೊತೆಯಾಗಿ ಕಳವತ್ತೇನೆ" ಎಂದು ಒಬ್ಬೊಬ್ಬರೂ ಧೈರ್ಯ, ಸಾಂತ್ವನಗಳನ್ನು ತುಂಬಲು ಪ್ರಯತ್ನಿಸುತ್ತಾರೆ. ಆದರೆ ಭಾಗೀರಥಿಗೆ ಇದ್ಯಾವುದರ ಅಗತ್ಯವಿಲ್ಲ. ಅವೆಲ್ಲವನ್ನೂ ನಿರಾಕರಿಸುತ್ತಾಳೆ. ತನ್ನನ್ನು ಬಲಿ

ಕೊಡಲಿರುವ ಅತ್ತೆ ಮಾವದಿರ ನಿರ್ಧಾರ ತಿಳಿಸಿ ಅವರ ಮನಸ್ಸಿಗೆ ನೋವುಂಟು ಮಾಡುವುದೂ ಸಾಧ್ಯವಿಲ್ಲ ; ಸತ್ಯವನ್ನು ಹೇಳದೆ ನುಂಗಿಕೊಂಡು ಇರುವುದಕ್ಕೂ ಸಾಧ್ಯವಿಲ್ಲ. ಆದರೆ ಯಾರಿಗಾದರೂ ಹೇಳದೆ ಮನಸ್ಸಿಗೆ ಸಮಾಧಾನವಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಅಂತರಂಗವನ್ನು ಬಿಚ್ಚಿಡಲು ಗೆಳತಿಯೊಬ್ಬಳೇ ಎನಿಸಿ, ಗೆಳತಿಯ ಮನೆಗೂ ಹೋಗಿ ಸತ್ಯ ಸಂಗತಿಯನ್ನು ಹೊರಗೆಡಹುತ್ತಾಳೆ. ಆದರೆ ಗೆಳತಿಯೂ ಇವಳಂತೆಯೇ ಒಬ್ಬ ಅಸಹಾಯಕ ಹೆಣ್ಣು ಮಗಳು. ಹಿರಿಯರ, ಅತ್ತೆ ಮಾವಂದಿರ ಆಜ್ಞೆಯನ್ನು ಮೀರುವ, ಅವರನ್ನು ವಿರೋಧಿಸುವ ಸಲಹೆಯನ್ನು ನೀಡಲಾರಳು. ಗೆಳತಿಯ ಪ್ರೀತಿ ಎಷ್ಟೇ ಇದ್ದರೂ, ಅವಳಿಗೆ ಬಂದು ಎರಗಿರುವ ವಿಪತ್ತು ಎಷ್ಟು ಕ್ರೂರವೆಂದು ಬಲ್ಲವಳಾದರೂ, ಅದರ ಬಗ್ಗೆ ಅವಳಿಗೆ ದುಃಖ, ಸಹಾನುಭೂತಿ ಇರುವುದಾದರೂ ಅದರಿಂದ ಅವಳನ್ನು ತಪ್ಪಿಸುವ ಮಾರ್ಗ ತಿಳಿದವಳಲ್ಲ.

"ನಮ್ಮತ್ತೆ, ನಮ್ಮಾವ ಕೆರೆಗ್ಹಾರ ಕೊಡ್ತಾರಂತ" ಎಂಬ ಸಿಡಿಲಿನಂಥ ಸತ್ಯವನ್ನು ಹೊರಗೆಡಹಿದರೂ, ಗಾಭರಿ, ತಲ್ಲಣಗಳೊಂದೂ ಇಲ್ಲದೆ, ಮಾಮೂಲಿ ಸಂಗತಿಯೊಂದಕ್ಕೆ ಸ್ಪಂದಿಸುವಂತೆ," ಕೊಟ್ಟರೆ ಕೊಡಲೇಳು ಇಟ್ಟಾಗ ಇರಬೇಕ!" ಎಂದು ಸಲೀಸಾಗಿ, ಸಹಜವಾಗಿ ಉತ್ತರಿಸುತ್ತಾಳೆ. ತನ್ನ ಭೇಟಿ ಏನೂ ಫಲವಿಲ್ಲದೆ ಹಿಂತಿರುಗಿ ಬಂದವಳು ತನ್ನೊಳಗೆ ತಾನೇ ದುಃಖಿಸುತ್ತಾ ಕಣ್ಣೀರಿಡುತ್ತಾಳೆ. ಎದೆಯಲ್ಲಿ ಬೆಂಕಿಯಂತಹ ನೋವಿದ್ದರೂ ಅತ್ತೆ ಮಾವಂದಿರ ಮುಂದೆ ತನ್ನ ಕಂಬನಿಯನ್ನು ಮರೆಮಾಚಿಡಲು ಪ್ರಯತ್ನಿಸುತ್ತಾಳೆ. ಅವಳು ಅದುಮಿಟ್ಟುಕೊಂಡ ದುಃಖ ಒತ್ತರಿಸಿ ಹೊರಗೆ ಕಂಬನಿಯಾಗಿ ಹರಿದಾಗ ಅತ್ತೆ ಮಾವಂದಿರು ಕಣ್ಣೀರಿಗೆ ಕಾರಣವೇನೆಂದು ವಿಚಾರಿಸಿದರೆ, ಕಣ್ಣಿಗೆ ಕಲ್ಲು ಬಿತ್ತು; ಹಳ್ಳು (ಹರಳು) ಬಿತ್ತು ಎಂದು ಹೇಳಿ ತಪ್ಪಿಸಿಕೊಳ್ಳುತ್ತಾಳೆ. ಎಲ್ಲವೂ ನಿರ್ಧಾರವಾಗಿದೆ. ತಾನು ಬಲಿಯಾಗು ವುದನ್ನು ತಪ್ಪಿಸಲು ಸಾಧ್ಯವಿಲ್ಲ. ಊರ ಕೆರೆಗೆ ನೀರು ಬರದೆ ಜನ ಸಮುದಾಯಕ್ಕೆ ಸುಖವಿಲ್ಲ. ತನ್ನ ನೆಲೆಯಿಂದ ದುರಂತವೆನಿಸಬಹುದಾದ ಈ ಘಟನೆ, ಊರ ದೃಷ್ಟಿಯಿಂದ ಪ್ರಯೋಜನಕಾರಿಯಾದುದು. ಪರೋಪಕಾರಕ್ಕಾಗಿ ತನ್ನ ಬಲಿ ಒಂದು 'ತ್ಯಾಗ' ವಾಗಲಿದೆ, ಹೀಗಿರುವಾಗ

ಏನೆಂದು ವಿರೋಧಿಸುವುದು ? ಆದರೆ ಕಡೆಗಳಿಗೇಲಿ ತನ್ನನ್ನು ಅನನ್ಯವಾಗಿ ಪ್ರೀತಿಸುವ ಗಂಡನಿಲ್ಲದೆ ಹೋಗಿರುವುದು ಅವಳ ದುಃಖ ಇಮ್ಮಡಿಸಲು ಕಾರಣವಾಗಿದೆ.

ಬಲಿ ಕೊಡುವ ಅಥವಾ ಕೆರೆಗೆ ಹಾರವಾಗುವ ದಿನ ಬಂದಂತೆ ಮನೆಯಲ್ಲಿ ಹಬ್ಬದ ಸಂಭ್ರಮ. ಗಂಗಾ ಪೂಜೆಯ ಅಬ್ಬರದ ಸಿದ್ಧತೆ. ನಿಂಗವ್ವ ಗಂಗವ್ವ ನಗಣ್ಣೆಯರು, ಸ್ವತಃ ಭಾಗೀರಥಿ ಜಳಕ ಮಾಡಿ, ಬಂಗಾರ ಬುಟ್ಟಿ ತುಂಬಿಸಿ ಸಿಂಗಾರ ಸಿಂಬಿ ಮಾಡಿಕೊಂಡು ಕೆರೆಯ ಬಳಿಗೆ ದಿಬ್ಬಣದಂತೆ ಹೊರಡುತ್ತಾರೆ. ಗಂಗೆಯ ಪೂಜೆ ಮೊದಲಾಗುತ್ತದೆ. ಬಿಲ್ವಪತ್ರೆ ಏರಿಸಿ, ವಿಭೂತಿ ಧರಿಸಿ, ಹೂವಿನ ದಂಡಿ ಮುಡಿಸಿ, ಸೀರೆ ಕುಪ್ಪಸಗಳನ್ನು ಅರ್ಪಿಸಿ, ತಂದ ವಿಶೇಷ ಭಕ್ಷ್ಯ ಭೋಜ್ಯಗಳನ್ನು ನೈವೇದ್ಯಕ್ಕಿರಿಸಿ, ನಂತರ ಎಲ್ಲರೂ ಕುಳಿತು ಪ್ರಸಾದನನ್ನು ಉಂಡು, ಉಳಿದದ್ದನ್ನೆಲ್ಲ ಬುಟ್ಟಿ ತುಂಬಿಸಿ ಹೊತ್ತು ಹಿಂತಿರುಗಲು ಸಿದ್ಧರಾದವರು, ಉದ್ದೇಶ ಪೂರ್ವಕವಾಗಿ ಬಂಗಾರದ ಬಟ್ಟಲನ್ನು ಬಿಟ್ಟು ಮರೆತು ಬರುತ್ತಾರೆ. ಅದನ್ನು ತರಲು ಗಂಗವ್ವ, ಗೌರವ್ವರು ಯಾರೂ ಒಪ್ಪುವುದಿಲ್ಲ. ಹಿರಿಯರ ಮಾತಿಗೆ ಪ್ರತಿಯಾಡದೆ ಸರಸರನೆ ಬಂದು ಕೆರೆಗಿಳಿದು ಬಂಗಾರ ಬಟ್ಟಲನ್ನು ಕೈಗೆತ್ತಿಕೊಂಡು ಒಂದೊಂದು ಮೆಟ್ಟಿಲು ಏರುತ್ತ ಹೋದಂತೆ ಗಂಗೆ ಉಕ್ಕಿ ಉಕ್ಕಿ ಕ್ರಮ ಕ್ರಮವಾಗಿ ಭಾಗೀರಥಿಯ ಪಾದಗಳನ್ನು, ಮೊಣಕಾಲನ್ನು, ನಡುವನ್ನು ಮುಳುಗಿಸುತ್ತಾ ಕಡೆಗೆ ಭಾಗೀರಥಿಯನ್ನು ಪೂರ್ತಿಯಾಗಿ ಆಹಾರವಾಗಿಸಿಕೊಂಡು ತಣಿಯುತ್ತಾಳೆ. ಒಣಗಿ ಬತ್ತಲಾಗಿದ್ದ ಕೆರೆ ತುಂಬಿ ತುಳುಕಾಡುತ್ತದೆ.

ಕಣ್ಣರಿಯದಿದ್ದರೂ ಕರುಳರಿಯದೇ? ಎಂಬಂತೆ ಇತ್ತ ಭಾಗೀರಥಿ ಕೆರೆಗೆ ಹಾರವಾಗುತ್ತಿದ್ದಂತೆ. ದಂಡಿನಲ್ಲಿದ್ದ ಗಂಡ ಮಾದೇವರಾಯನಿಗೆ ಮೂಕ ಸಂಕಟದೊಂದಿಗೆ ಅನಿಷ್ಟ ಕನಸುಗಳು, ಅಪಶಕುನಗಳು, ಸೆಲ್ಯ ಸುಟ್ಟಂಗೆ, ಕೋಲು ಮುರಿದಂಗೆ, ಮಾಲು (ಕಟ್ಟಿಸಿದ ಮಹಲು) ತಟ್ಟನೆ ಬಿದ್ದಂಗೆ, ಇನ್ನೂ ಏನೇನೋ ಆಗಿ ದುರಂತದ ಕಲ್ಪನೆಗೆ, ಅನಿಷ್ಟ ಸಂಭವಿಸಿರುವ ಭೀತಿಗೆ ಅವನನ್ನು ಗುರಿಮಾಡುತ್ತವೆ. ಈ ಎಲ್ಲ ಅನುಭವಗಳು ಅವನನ್ನು ನಿಂತ ಕಾಲ ಮೇಲೇ, ಬತ್ತಲಗುದುರೆಯೇರಿ

ಊರಿನ ಕಡೆಗೆ ಬರುವಂತೆ ಪ್ರಚೋದಿಸುತ್ತವೆ. ಒಂದೇ ಉಸಿರನಲ್ಲಿ ತನ್ನೂರಿನತ್ತ ಬಂದು ಮನೆ ಹೊಕ್ಕು ತಂದೆ ತಾಯಿಯರನ್ನು ಕಾಣುತ್ತಾನೆ. ಬಂದವನಿಗೆ ಆಸರು ತೀರಿಸಲು ಗಂಗವ್ವ, ಗೌರವ್ವರ ಹೆಸರು ಹಿಡಿದು ಆದೇಶಿಸುತ್ತಾರೆಯೇ ಹೊರತು ಭಾಗೀರಥಿಯ ಹೆಸರಿನ ಪ್ರಸ್ತಾಪವೇ ಮಾಡದಿರುವುದು ಮಾದೇವರಾಯನಲ್ಲಿ ಅನುಮಾನ ಮೂಡಿಸುತ್ತದೆ. ಮಡದಿಯಿರುವಾಗ ಬೇರೆಯವರು ತನ್ನಾಸರೇಕೆ ತೀರಿಸಬೇಕು ? ಸಂದೇಹ ಮೂಡಿದ್ದೆ ತನ್ನ ಮಡದಿ ಭಾಗೀರಥಿ ಎಲ್ಲಿ ಹೋದಳೆಂದು ವಿಚಾರಿಸುತ್ತಾನೆ.

ತಂದೆ ತಾಯಿಗಳಿಗೆ ಸಂದಿಗ್ಧ. ಸಂಕೋಚ, ಹಿಂಜರಿಕೆ, ಯಾವ ಬಾಯಿಂದ ತಮ್ಮ ಕ್ರೂರ ಕರ್ಮದ ಬಗ್ಗೆ ಹೇಳಿಯಾರು ? ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರುಷ ಆಯುಸ್ಸೆಂಬಂತೆ, ತತ್ತಕ್ಷಣಕ್ಕೆ ಸುಳ್ಳು ಹೇಳಿ ತಪ್ಪಿಸಿಕೊಳ್ಳಬಹುದೆಂದು 'ನಿನ್ನ ಮಡದಿ ಭಾಗೀರಥಿ ತವರಿಗೆ ಹೋಗ್ಯಾಳ 'ಎಂದಷ್ಟೇ ಹೇಳಿ ಸುಮ್ಮನಾಗುತ್ತಾರೆ. ತಂದೆ ತಾಯಿ ನಿಜವನ್ನೇ ಹೇಳಿದ್ದಾರೆಂಬ ಮುಗ್ಧ ನಂಬಿಕೆಯಲ್ಲಿ ಮತ್ತೊಮ್ಮೆ ಬತ್ತಲಗುದುರಿ ಏರಿ ಭಾಗೀರಥಿಯ ತವರಿನತ್ತ ಹೋಗುತ್ತಾನೆ. ಆದರೆ ಅಲ್ಲಿಯೂ ತನ್ನನ್ನು ಸತ್ಕರಿಸಲು ನಿಂಬವ್ವ ನೀಲವ್ವರಿಗೆ ಹೇಳಲಾಗುತ್ತದೆಯೋ ಹೊರತು ಭಾಗೀರಥಿಗಲ್ಲ. ಮಾದೇವನ ಭೀತ ಮನಸ್ಸಿಗೆ, ಅನುಮಾನಕ್ಕೆ ಎಣೆಯಿಲ್ಲದಾಗುತ್ತದೆ. ಅತ್ತೆ ಮಾವಂದಿರಲ್ಲಿ ಭಾಗೀರತಿಯ ಬಗ್ಗೆ ವಿಚಾರಿಸಿದಾಗ, ಗೆಳತಿ ಮನೆಗೆ ಹೋಗಿದ್ದಾಳೆಂದು ತಿಳಿಸುತ್ತಾರೆ. ಅವರಿಗೂ ಭಾಗೀರಥಿಗೆ ಏನಾಗಿರಬಹುದೆಂಬ ಕಲ್ಪನೆಯಿಲ್ಲ. ಅವರ ಮಾತನ್ನು ನಂಬಿ, ಇನ್ನೇನು ತನ್ನ ಪ್ರೀತಿಯ ಭಾಗೀರಥಿಯನ್ನು ಕಾಣುವೆನೆಂಬ ಸಂತೋಷ, ಸಂಭ್ರಮ, ವಿಶ್ವಾಸಗಳೊಂದಿಗೆ ಆತುರಾತುರವಾಗಿ ಗೆಳತಿ ಮನೆ ಕಡೆ ಹೊರಟು, ಗೆಳತಿಯನ್ನು ಕಂಡು ಭಾಗೀರಥಿಯ ಬಗ್ಗೆ ವಿಚಾರಿಸಿದಾಗ,' ಬುಟ್ಟಿಯಲ್ಲಿ ಬಂದಿಯಾಗಿ ಬಿದ್ದಿದ್ದ ಸತ್ಯದ ಹಾವು ಬುಸ್ಸನೆ ಹೊರಗೆ ಹೆಡೆ ಎತ್ತುತ್ತದೆ' ತನ್ನ ತಂದೆ ತಾಯಿಗಳು ತನ್ನ ಮೋಹದ ಮಡದಿಯನ್ನು ಕೆರೆಗೆ ಹಾರ ಕೊಟ್ಟಿದ್ದಾರೆ. ಇದು ಮಾದೇವನಿಗೆ ಭರಿಸಲಾಗದ ಆಘಾತವನ್ನುಂಟು ಮಾಡುತ್ತದೆ. ಆ ಕ್ಷಣದಲ್ಲಿ ಅವನಿಗೆ ಅಪ್ಪ ಅಮ್ಮನ ಅಮಾನುಷ ಕೃತ್ಯದಿಂದ

ಉಂಟಾಗಬೇಕಿದ್ದ ಆಕ್ರೋಶಕ್ಕೆ ಬದಲಾಗಿ ಒಮ್ಮೆಲೇ ಶೋಕದ ಕಡಲು ಕಟ್ಟೆಯೊಡೆದು ಕೊಂಡು ಹೊಮ್ಮಿ ಬರುತ್ತದೆ. ಬತ್ತಲಗುದುರಿಯೇರಿ ಹಾರವಾದ ಕೆರೆಯ ಬಳಿಗೆ ಬಂದು ದಂಡೆಯಲ್ಲಿ ನಿಂತು ಕಂಬನಿಯ ಕೋಡಿ ಹರಿಸಿ, ನಿಟ್ಟುಸಿರು ಬಿಟ್ಟು, ಮೋಹದ ಮಡದಿಯನ್ನು ನೆನಪಿಸಿಕೊಳ್ಳುತ್ತಾನೆ. ಅವನ ಶೋಕ, ವಿಲಾಪಗಳು ಎಂತಹವರ ಗಂಡೆದೆಗಳನ್ನೂ ಕರಗಿಸಿ ಬಿಡುತ್ತವೆ. ದುಃಖಾರ್ತನಾಗಿ "ಸಾವಿರ ವರಹ ಕೊಟ್ಟರೂ ಸಿಗಲಾರದ ಸತಿ ನೀನು, ಸಿಗಲಾರದ ಸತಿ ನೀನು ನನಬಿಟ್ಟು ಎಲ್ಲಿ ಹೋದೆ ?" ಎಂದು ವಿಲಾಪಿಸುವ, ಈ ಮಾದೇವನ ಮಡದಿಯ ಪ್ರೀತಿಯ ಆಳ, ಅನನ್ಯತೆಗಳು 'ದಾಂಪತ್ಯ ಪ್ರೀತಿ'ಯ ಗಾಢತೆಗೆ ಒಂದು ನಿದರ್ಶನವಾಗಿದೆ. ಅವಳನ್ನು ನೆನಪಿಸಿಕೊಂಡು ಕೇವಲ ಆಳುತ್ತಾ ಕೂಡುವಷ್ಟಕ್ಕೇ ತೃಪ್ತನಾಗದೆ, ಅಂತಹ ಮಡದಿಯ ಹೊರತು ಬಾಳು ಅಸಹನೀಯವೆನಿಸಿ, ಸಾವಿನ ಮೂಲಕವೇ ಅವಳನ್ನು ಸಮೀಪಿಸುವ ನಿರ್ಧಾರದೊಂದಿಗೆ ತಾನೂ ಕೆರೆಗೆ ಜಿಗಿದು ಆತ್ಮಾರ್ಪಣ ಮಾಡಿಕೊಳ್ಳುತ್ತಾನೆ. ಬಹುಶಃ ಪ್ರಪಂಚದಲ್ಲಿಯೇ ಅಪರೂಪದ ನಿದರ್ಶನವಾಗಿ, ಅವನು ಸತಿಯೊಡನೆ ಸಹಗಮನ ಮಾಡಿ, ದಾಖಲೆಯಾಗುವಂತೆ ಉಳಿಸಿದ್ದಾನೆ. ಇಂತಹ 'ಅಮರ ಪ್ರೇಮ' ಮತ್ತೆಲ್ಲಿಯೂ ಸಾಧ್ಯವಾಗದೇನೋ'

★ ★ ★

## ಕಡೆ ಮಾತು

ಹಿಂದಿನ ಈ ಎಲ್ಲ ಪ್ರಸಂಗಗಳ ಮೂಲಕ ಪರಂಪರೆಯ ಕಾವ್ಯಲೋಕವನ್ನು ಪ್ರವೇಶಿಸಿದಾಗ, ಇಡೀ ಮನುಕುಲ. ಮನುಕುಲದ ಮಾನವರು-ಅವರ ಚಿತ್ತವೃತ್ತಿಗಳು, ವಿವಿಧ ಸ್ವಭಾವಗಳು, ಮನುಷ್ಯ ಸಂಬಂಧಗಳು, ಸಂಬಂಧ ಸ್ವರೂಪಗಳನ್ನು ನಿರ್ಮಿಸಿದ ಹಿನ್ನೆಲೆಯ ಭಾವ ಮೂಲಗಳು- ಇತ್ಯಾದಿ ಇತ್ಯಾದಿಗಳೆಲ್ಲವೂ ವಿಶ್ವರೂಪಿಯಾಗಿ ಸಾಕ್ಷಾತ್ಕಾರಗೊಂಡು ನಿಲ್ಲುತ್ತವೆ. ಪ್ರೀತಿ, ಪ್ರೇಮ, ನಿಷ್ಠೆ, ತ್ಯಾಗ, ವಾತ್ಸಲ್ಯ, ಮೊದಲಾದ ಭಾವ ಮೌಲ್ಯಗಳು ನಮ್ಮ ಕವಿಗಳಿಗೆ ಆದರ್ಶಗಳಾಗಿ ಕಾಣಿಸಿಕೊಂಡು, ಅವುಗಳನ್ನು ಎತ್ತಿ ಹಿಡಿಯುವ ಹುನ್ನಾರದಲ್ಲಿ, ಅವುಗಳ ಜೊತೆ ಜೊತೆಗೇ ಅವುಗಳ ಒಡಲಾಳದಲ್ಲಿ ನಿಗೂಢವೂ ನಿಕ್ಷಿಪ್ತವೂ ಆದ ಭಯಂಕರ ಪರಿಣಾಮಗಳತ್ತಲೂ ಸೂಕ್ಷ್ಮ ನಿರ್ದೇಶವನ್ನೂ ನೀಡುತ್ತಾರೆ.

ಗುಣಾತ್ಮಕ ಭಾವ ಮೌಲ್ಯವಾದ 'ಪ್ರೀತಿ' ನಮ್ಮೆಲ್ಲ ಕವಿಗಳ ಕಾವ್ಯಗಳಲ್ಲಿ ಕಥಾವಸ್ತುವಿನ ಅಂತರ್ಗತ ಭಾಗವಾಗಿ, ಅನಿವಾರ್ಯವಾಗಿ ಕಾಣಿಸಿಕೊಳ್ಳುತ್ತದೆ. 'ಪ್ರೀತಿ' ಎಲ್ಲರ ಅಪೇಕ್ಷಿತ ಮೌಲ್ಯವೇ ಆದರೂ ಪ್ರೀತಿಯ ಪರಿಣಾಮ ಯಾವಾಗಲೂ ಒಳ್ಳೆಯದಲ್ಲ. ಪ್ರೀತಿಯ ಗಾಢತೆ, ಹಿಂದಿನ ಉದ್ದೇಶಗಳೇ ಪ್ರೀತಿಯ ಸಂಬಂಧಗಳ ಕೊಲೆಗೆ ದಾರಿ ಮಾಡುತ್ತವೆ. ಪ್ರೀತಿಸಿದ ಜೀವಿಗಳ, ವಸ್ತುಗಳ ವಿನಾಶಕ್ಕೂ ಕಾರಣವಾಗುತ್ತದೆ. ಒಂದು ನೆಲೆಯಿಂದ ಒಬ್ಬರಿಗೆ ರಕ್ಷಾಕವಚವಾದರೆ. ಮತ್ತೊಂದುನೆಲೆಯಿಂದ ಇನ್ನೊಬ್ಬರಿಗೆ ಅದು ಮಾರಕಾಸ್ತ್ರವಾಗುತ್ತದೆ; ಅನಿಷ್ಟ ಪರಂಪರೆಗೆ, ಅಘಾತಕಾರಿ ಪರಿಣಾಮಗಳಿಗೆ ದಾರಿಯಾಗುತ್ತದೆ.

ನಮ್ಮ ಸಾಂಸ್ಕೃತಿಕ ಪರಂಪರೆಯ ಮೇರು ಕೃತಿಗಳಾದ ರಾಮಾಯಣ, ಮಹಾಭಾರತಗಳು, ಪ್ರೀತಿ ಸಂಬಂಧ ಸ್ವರೂಪವನ್ನು ಹಲವು ಸನ್ನಿವೇಶ, ಸಂದರ್ಭಗಳ ಮೂಲಕವಾಗಿ ವಿಶ್ಲೇಷಿಸಿವೆ. ಪ್ರೀತಿ, ಅತಿ ಪ್ರೀತಿ ಒಬ್ಬರ ಪಾಲಿಗೆ ಅಮೃತವಾದರೆ ಇನ್ನೊಬ್ಬರ ಪಾಲಿಗೆ ವಿಷವಾಗುತ್ತದೆ. ರಾಮಾಯಣದ ಮಂಥರೆ ಪ್ರಸಂಗ ಇದಕ್ಕೊಂದು ಉತ್ತಮ ನಿದರ್ಶನ. ವಾಲ್ಮೀಕಿಯಿಂದ ಹಿಡಿದು ಇವತ್ತಿನ ಸಮಕಾಲೀನ

ಕವಿಗಳೆಲ್ಲರೂ ಮಂಥರೆಯನ್ನು ತಮ್ಮ ತಮ್ಮ ಕಣ್ಣಿಗೆ ಅನುಗುಣವಾಗಿ ಚಿತ್ರಿಸಿದರೂ ರಾಮನ ವನಾಂತರಕ್ಕೆ ಅವಳನ್ನೇ ಗುರಿಮಾಡಿರುವುದು ಸರ್ವ ವಿದಿತ. ಆದರೆ 'ರಾಮಾಯಣ ದರ್ಶನಂ'ನ ಮಹಾಕವಿ ಕುವೆಂಪು 'ಮಂಥರೆ' ಯನ್ನು ಮಾನವೀಯ ಮತ್ತು ಮನುಷ್ಯ ಸಹಜ ನೆಲೆಯಿಂದ ಅರ್ಥೈಸುವ ಪ್ರಯತ್ನ ಮಾಡಿದ್ದಾರೆ. ಆಕೆಗೆ ರಾಮನ ಬಗ್ಗೆ ದ್ವೇಷವಿಲ್ಲ. ಆದರೆ ಭರತ, ಕೈಕೆಯರ ಬಗ್ಗೆ ಅತಿಯಾದ ಅಥವಾ ಅತಿರೇಕದ ಪ್ರೀತಿ ಇದೆ . ಅವರ ಕ್ಷೇಮ ಚಿಂತನೆ. ಅವಳೊಳಗಿನ ಕ್ಷುಲ್ಲಕ, ದುಷ್ಟ ವ್ಯಕ್ತಿತ್ವವನ್ನು ಹೊರಗೆಡಹುತ್ತದೆ. ರಾಮ ಹಗೆ ಹಾವಾಗಿ ಕೊಲ್ಲುತ್ತದೆಂಬ ಭೀತಿ, ರಾಮನ ಬಗೆಗೆ ಕೈಕೆಗೆ ಇದ್ದ ಪ್ರೀತಿ, ಮಂಥರೆಗೆ, ಅಸಹನೀಯವಾಗುತ್ತದೆ. ಅವಳನ್ನು ಮೆಚ್ಚುವುದಕ್ಕೆ ಬದಲಾಗಿ "ಪೆತ್ತ ಮಗುವನೆ ತಿಂಬ ರಕ್ಕಸಿಯ, ಪಾಂಗಿನಿಂವಾಡುತಿಹೆ ; ನಿನ್ನ ಕಂದಗೆ ನೀನೆ ಮಿಳ್ತು. ರಾಮಾಭಿಷೇಕಂ ನಿನಗೆ ಪ್ರಿಯವಾರ್ತೆಯೇಂ ? ವೈರಿ ಬೇರುಂಟೆ ಲೋಕದಿ ಸವತಿ ಮಗನಿಗಿಂ ?" ಎಂದೆಲ್ಲ ಆಡಿ, ಕೈಕೆಯ ಹಾಲಿನಂಥ ಮನಸ್ಸನ್ನು ಹುಳಿ ಹಿಂಡಿ ಕೆಡಿಸುತ್ತಾಳೆ. ರಾಮ ವನವಾಸಕ್ಕೆ ದಾರಿ ಮಾಡುವ ಅನೇಕ ಉಪಾಯ, ಹುನ್ನಾರಗಳನ್ನು ರೂಪಿಸುತ್ತಾಳೆ. ರಾಮಾಯಣ ಕಥಾ ಘಟನೆಗಳಿಗೆ ಬೀಜಾಂಕುರವಾಗುತ್ತಾಳೆ.

ಮಂಥರೆ ದೇವತೆಯಲ್ಲ ; ಸಾಧು ಸಜ್ಜನಳಲ್ಲ, ಎಲ್ಲರಂತೆ ಸಾಮಾನ್ಯ ಮನುಷ್ಯಳು. ಮನುಷ್ಯ ಸಹಜವಾದ ಆಸೆ, ಆಕಾಂಕ್ಷೆಗಳನ್ನುಳ್ಳವಳು. ತಾನು ಪ್ರೀತಿಸುವವರಿಗೆ ಸುಖಸಂತೋಷ, ಅಧಿಕಾರವನ್ನು ಗಳಿಸಿಕೊಡುವುದಕ್ಕೆ ಏನೆಲ್ಲ ಮಾಡಬಹುದೋ ಅದೆಲ್ಲವನ್ನೂ ಮಾಡುತ್ತಾಳೆ. ಎದುರಿನವರಿಗೆ ಏನಾಗುತ್ತದೆ, ಏನು ಅನುಭವಿಸುತ್ತಾರೆ ಅನ್ನವುದು ಅವಳಿಗೆ ಬೇಕಾಗುವುದಿಲ್ಲ. ರಾಮನ ವನವಾಸ, ದಶರಥನ ಸಾವು, ತಾಯಿ ಮಕ್ಕಳ ವಿಯೋಗ, -ವನವಾಸದ ಅವಧಿಯಲ್ಲಿ ಎದುರಾದ ಕಷ್ಟ ಪರಂಪರೆ-ಹೀಗೆ ಏನೆಲ್ಲ ಸಂಭವಿಸುತ್ತದೆ. ಆದರೆ ಇದೆಲ್ಲವೂ ಮಂಥರೆಯ ಪ್ರೀತಿಯ ಪರಿಣಾಮ !

ಹಾಗಾಗಿ ಪ್ರೀತಿ ಮೇಲು ನೋಟಕ್ಕೆ ಎಷ್ಟೇ ಸುಂದರವಾಗಿ ಕಂಡರೂ, ಪ್ರೀತಿಗಿರುವ ಎರಡು ತೀರಗಳು, ಎರಡು ಮುಖಗಳು-ಒಂದೇ

ಬಗೆಯ ಪರಿಣಾಮ ಸುಖವನ್ನು ಕಾಣಲಾರವು. ಒಮ್ಮೊಮ್ಮೆ ಪ್ರೀತಿಸು
ಮತ್ತು ಪ್ರೀತಿಗೆ ಒಳಗಾಗುವ ವಸ್ತು, ವ್ಯಕ್ತಿ- ಎಲ್ಲವೂ ವಿನಾಶದಲ್ಲಿ
ಪರ್ಯವಸಾನವನ್ನು ಕಾಣುವಂತಾಗುತ್ತದೆ.

ದಿನ ನಿತ್ಯದ ಬದುಕಿನಲ್ಲಿಯೂ ಇಂತಹ ಅನೇಕ ಪ್ರಸಂಗಗಳನ್ನು
ಕಾಣಬಹುದು. 'ಪ್ರೀತಿ' ಒಂದು ಹಂತದಲ್ಲಿ ಹೆಚ್ಚು ಪೊಸೆಸ್ಸೀವ್ ಆಗಿ
ಒಡೆತನವನ್ನು ಸಾಧಿಸಿಕೊಳ್ಳುವ ಪ್ರಯತ್ನ ಅದಾಗಿರುತ್ತದೆ. ಹಾಗಾದಲ್ಲಿ
ಪ್ರೀತಿ ಸ್ವಾತಂತ್ರ್ಯಹರಣಕಾರಿಯೂ, ನಿರ್ಬಂಧಕಾರಿಯೂ ಆಗುತ್ತದೆ.
ಪ್ರೀತಿಗೊಳಗಾದ ವ್ಯಕ್ತಿಗೆ ಸಂತೋಷಕ್ಕಿಂತ ಹೆಚ್ಚಾಗಿ ನೋವು, ಮಾನಸಿಕ
ಹಿಂಸೆ, ಕಡೆಗೆ ಅಂತಹ ಪ್ರೀತಿಯನ್ನು, ಪ್ರೀತಿಸುವವರನ್ನು
ಧಿಕ್ಕರಿಸುವಂತಾಗುತ್ತದೆ.

'ಪ್ರೀತಿ'ಯೇ ಒಂದು ಅದ್ಭುತ ಅನುಭವ ಅದರ ಸುತ್ತ
ಚಿಗುರುವ ಅನೇಕ ಮನಃಸ್ಥಿತಿಗಳು ಮತ್ತೂ ಬೆರಗನ್ನು ಜಿಜ್ಞಾಸೆಯನ್ನೂ,
ಗಂಭೀರವಾದ ಒಂದು ತಾತ್ವಿಕ ಚಿಂತನೆಯನ್ನೂ ಹುಟ್ಟು ಹಾಕುತ್ತವೆ.
ಇಂತಹ ಒಂದು ಚಿಂತನೆಯೇ ಈ ಕೃತಿಗೆ ಪ್ರೇರಣೆಯಾಗಿದೆ.

★ ★ ★



'ಪ್ರೀತಿ' ಎಂಬುದು ಒಂದು ಅನುಭೂತಿಯೇ ಹೊರತು ವ್ಯಾಖ್ಯಾನಕ್ಕೆ, ಪರಿಭಾಷೆಯ ಚೌಕಟ್ಟಿಗೆ ನಿಲುಕುವುದಿಲ್ಲ; ಗ್ರಹಿಕೆಗೆ ಬರುವುದಿಲ್ಲ. ಪ್ರೀತಿ ತನ್ನೊಳಗೆ ತಾನೇ ಹಲವು ಅರ್ಥಗಳನ್ನು ಅಡಗಿಸಿಕೊಂಡಿದೆ. ಹಲವು ಆಯಾಮಗಳನ್ನು ಒಳಗೊಂಡಿದೆ. ವ್ಯಕ್ತಿ ವ್ಯಕ್ತಿಯ ನಡುವೆ ಒಡೆದೆದ್ದು ಕಾಣುವಂತಹ ಪ್ರೀತಿಯೇ ಇದ್ದರೂ ಆ ಪ್ರೀತಿಯ ನಂಟಿನ ಹಿಂದೆ, ಪ್ರೀತಿಸುವ ವ್ಯಕ್ತಿಗಳ ಮನದಾಳದ ವಿಚಾರಗಳು ಅಲೋಚನೆಗಳು ಸುಪ್ತ ಭಾವೋದ್ದೇಶಗಳೂ ಏನಿವೆಯೆಂಬುದೂ ಬಹು ಮುಖ್ಯವಾಗುತ್ತದೆ. ಮೇಲೆ ಕಾಣುವ ಪ್ರೀತಿಯ ಮುಖ ಬೆಲೆಯಿಂದಲೇ 'ಸಾಚಾ' ಸರಳ ಮುಗ್ಧ ಎಂದು ನಂಬಿ ಮೋಸ ಹೋಗಬೇಕಾದ್ದಿಲ್ಲ. 'ಪ್ರೀತಿ' ಎಂದರೆ ಜೀವನ; ಜೀವನ ಎಂದರೆ ಪ್ರೀತಿ; ಪ್ರೀತಿ ಸರಳ; ಸುಂದರ ಎಂದು ಭಾವುಕವಾಗಿ ಬಣ್ಣಿಸುವುದುಂಟು. ಆದರೆ 'ಪ್ರೀತಿ' ಎಂಬುದು ಸಂಕೀರ್ಣ. ಸುಲಭವಾಗಿ ಪ್ರೀತಿಯ ಅಂತರಾರ್ಥವನ್ನು ಅರಿಯಲು ಸಾಧ್ಯವಿಲ್ಲ. ಆದ್ದರಿಂದಲೇ ಪ್ರೀತಿಗೆ ಇರುವ ಅಸಾಧ್ಯ ನೆಲೆಗಳ ಚಿಂತನೆ ಅತಿ ಮುಖ್ಯವೆನಿಸುತ್ತದೆ. ಬಂಧು ಪ್ರೀತಿ, ಮಿತ್ರ ಪ್ರೀತಿ, ಸೋದರ ಪ್ರೀತಿ, ತಂದೆ ತಾಯಿ ಮಕ್ಕಳ ಪ್ರೀತಿ, ಗಂಡು, ಹೆಣ್ಣಿನ ಪ್ರೀತಿ, ಜೊತೆಗೆ ಯಜಮಾನ ಸೇವಕ ಪ್ರೀತಿ (ಸ್ವಾಮಿ ಪ್ರೀತಿ) ಯೂ ಉಂಟು. ಮೇಲಿನ ಎಲ್ಲ ಸಂಬಂಧಗಳಲ್ಲಿ ಪ್ರೀತಿ ಅನಿವಾರ್ಯವಾಗದೇ ಹೋದರೂ ಪ್ರೀತಿಸುವುದಕ್ಕೆ, ಪ್ರೀತಿ ಹುಟ್ಟುವುದಕ್ಕೆ ಒಂದು ಕಾರಣ ಇದ್ದೇ ಇರುತ್ತದೆ. ಸೌಂದರ್ಯ, ಸೇವೆ, ವಾತ್ಸಲ್ಯ, ಉಪಕಾರ-ಹೀಗೆ ಯಾವುದಾದರೂ ಒಂದು ಕಾರಣ ಇರಬಹುದು. ಎಲ್ಲ ಸಂಬಂಧಗಳಲ್ಲಿನ ಪ್ರೀತಿಗಿಂತ ತಾಯಿ ಮಕ್ಕಳ ಪ್ರೀತಿಯೊಂದೇ ಪರಿಶುದ್ಧವಾದುದು. 'ಪ್ರೀತಿ'ಸುವ ಕ್ರಿಯೆ ಒಳ್ಳೆಯದೇ ಆದರೂ ಪ್ರೀತಿಯ ಪರಿಣಾಮಗಳು ಒಳ್ಳೆಯದಾಗಿರುತ್ತವೆಂದು ಹೇಳಲಾಗುವುದಿಲ್ಲ. ಪ್ರೀತಿಯ ನೆಲೆಯಲ್ಲಿ ಆನಂದ, ಸುಖ, ಸಂತೋಷ, ನೆಮ್ಮದಿ, ನಿಸ್ವಾರ್ಥತೆ, ತ್ಯಾಗ ಇತ್ಯಾದಿ ಗುಣಾತ್ಮಕ ಮೌಲ್ಯಗಳಿರುವುದು ಎಷ್ಟು ಸತ್ಯವೋ ಅವುಗಳ ಜೊತೆಗೆ ಸೇಡು, ದ್ವೇಷ, ಸ್ವಾರ್ಥ, ಸಾವು, ನೋವು ಇತ್ಯಾದಿ ಋಣಾತ್ಮಕ ಮೌಲ್ಯಗಳಿರುವುದೂ ಅಷ್ಟೇ ಸತ್ಯ.

ಡಾ. ವಿಜಯಾ ಸುಬ್ಬರಾಜ್

